



# ಹೊಂಗನಸು



ಬಿ.ಎಂ.ಶ್ರೀ ಪ್ರತಿಷ್ಠಾನದ ವಾರ್ತಾಪತ್ರ

ಹೊಂಗನಸು – 43

| ಸಂಪುಟ: ೦೫ ಸಂಚಿಕೆ: ೫ | ಆಗಸ್ಟ್ ೨೦೧೮ | ಪುಟಗಳು ೮ | ವಾರ್ಷಿಕ ಚಂದ ರೂ. ೨೦/– | ಸಂಪಾದಕರು : ಶ್ರೀ ಬಿ. ಆರ್. ರವೀಂದ್ರನಾಥ್ |
|---|---|---|---|---|
| Vol. 05 Issue 5 | August 2018 | Pages - 8 | A. Sub. - Rs. 20/- | Editor : Sri. B.R. Ravindranath |


## ಗೋವಿಂದರಾವ್ ಜಾಲಿಹಾಳ ದತ್ತಿ ಭಕ್ತಿ ಗೀತೆಗಳ ಸ್ಪರ್ಧೆ ಕಾರ್ಯಕ್ರಮ

ಪ್ರತಿಷ್ಠಾನದ ಆವರಣದಲ್ಲಿ ಭಾನುವಾರ ೨೪ನೇ ಜೂನ್ ರಂದು ಸಂಗೀತ ಸ್ಪರ್ಧೆಗೆ ಆಗಮಸಿದ್ದ ಯುವಕ ಯುವತಿಯರ ಸಡಗರ ಮತ್ತು ಸಂಭ್ರಮದ ವಾತಾವರಣ ನಿರ್ಮಾಣವಾಗಿತ್ತು. ಗೋವಿಂದರಾವ್ ಜಾಲಿಹಾಳ ದತ್ತಿ ಕಾರ್ಯಕ್ರಮದ ಐದನೇ ವರ್ಷದ ಸಂಗೀತ ಸ್ಪರ್ಧೆಗೆ, ೧೩ರಿಂದ ೧೮ರ ಹರೆಯದ ವಿದ್ಯಾರ್ಥಿಗಳು ತಮ್ಮ ಪೋಷಕರೊಡನೆ ಸಭಾಂಗಣದಲ್ಲಿ ಸಮಾವೇಶಗೊಂಡಿದ್ದರು.

ಖ್ಯಾತ ಲೇಖಕಿ ಮತ್ತು ಗಾಯಕಿ ಡಾ॥ ಅನಸೂಯಾದೇವಿ ಹಾಗೂ ಆಕಾಶವಾಣಿ ಕಲಾವಿದರೂ ಮತ್ತು "ಗಮಕ ಕೋವಿದೆ" ಬಿರುದಾಂಕಿತ ಶ್ರೀಮತಿ ಶೋಭಾ ಶಶಿಧರ್ ಅವರು ತೀರ್ಪುಗಾರರಾಗಿದ್ದರು.

ಡಾ. ವಿಜಯಾ ಸುಬ್ಬರಾಜ್ ಅವರು ದತ್ತಿ ಕಾರ್ಯಕ್ರಮದ ಬಗ್ಗೆ ಪ್ರಾಸ್ತಾವಿಕ ನುಡಿಗಳನ್ನಾಡಿ, ದತ್ತಿ ಕುಟುಂಬ ವರ್ಗದವರನ್ನೂ ಮತ್ತು ಸ್ಪರ್ಧೆಗೆ ಆಗಮಿಸಿದ್ದ ಸ್ಪರ್ಧಿಗಳನ್ನೂ, ಪೋಷಕರನ್ನೂ ಸ್ವಾಗತಿಸಿ, ಸಭೆಗೆ ತೀರ್ಪುಗಾರರ ಪರಿಚಯವನ್ನು ಮಾಡಿದರು. **೮ನೇ ಪುಟಕ್ಕೆ**



### ಶಾ. ಬಾಲೂರಾವ್ ಯುವಬರಹಗಾರ ಪ್ರಶಸ್ತಿಗಾಗಿ ಕೃತಿಗಳ ಆಹ್ವಾನ

ಬಿ.ಎಂ.ಶ್ರೀ. ಪ್ರತಿಷ್ಠಾನವು ಪ್ರತಿ ವರ್ಷ ನೀಡುವ ಇಪ್ಪತ್ತೈದು ಸಾವಿರ ರೂಪಾಯಿಗಳ ನಗದು ಹಾಗೂ ಸ್ಮರಣಿಕೆಯನ್ನು ಒಳಗೊಂಡಿರುವ ಶಾ. ಬಾಲೂರಾವ್ ಯುವ ಬರಹಗಾರ ಪ್ರಶಸ್ತಿಗಾಗಿ ೩೫ ವರ್ಷ ವಯಸ್ಸು ಮೀರದ ಯುವ ಬರಹಗಾರರು ರಚಿಸಿದ ೨೦೧೭ರಲ್ಲಿ ಮೊದಲ ಮುದ್ರಣವಾಗಿ ಪ್ರಕಟವಾಗಿರುವ ಸಾಹಿತ್ಯದ ಯಾವುದೇ ಪ್ರಕಾರದ ಕೃತಿಗಳನ್ನು ಆಹ್ವಾನಿಸುತ್ತಿದೆ. ಆಸಕ್ತ ಲೇಖಕರು ಪ್ರಕಟಗೊಂಡ ಕೃತಿಯ ಎರಡು ಪ್ರತಿಗಳನ್ನು ತಮ್ಮ ವಿವರಗಳ ಜೊತೆ ಗೌರವ ಕಾರ್ಯದರ್ಶಿ, ಬಿ.ಎಂ.ಶ್ರೀ. ಪ್ರತಿಷ್ಠಾನ, ೩ನೇ ಮುಖ್ಯರಸ್ತೆ, ನರಸಿಂಹರಾಜ ಕಾಲೋನಿ, ಬೆಂಗಳೂರು–೫೬೦೦೧೯, ಇವರಿಗೆ ಕಳುಹಿಸಬಹುದು. ಕೊನೆಯ ದಿನಾಂಕ : ೧೦ನೇ ಆಗಸ್ಟ್ ೨೦೧೮ ಸಂಪರ್ಕಿಸಿ : ೦೮೦–೨೬೬೧೫೮೭೭

### ಶಾ.ಬಾಲೂರಾವ್ ಅನುವಾದ ಪ್ರಶಸ್ತಿಗಾಗಿ ಕೃತಿಗಳ ಆಹ್ವಾನ

ಬಿ.ಎಂ.ಶ್ರೀ. ಪ್ರತಿಷ್ಠಾನವು ಪ್ರತಿ ವರ್ಷ ನೀಡುವ ಇಪ್ಪತ್ತೈದು ಸಾವಿರ ರೂಪಾಯಿಗಳ ನಗದು ಹಾಗೂ ಸ್ಮರಣಿಕೆಯನ್ನು ಒಳಗೊಂಡಿರುವ ಶಾ. ಬಾಲೂರಾವ್ ಅನುವಾದ ಪ್ರಶಸ್ತಿಗಾಗಿ ೨೦೧೭ರಲ್ಲಿ ಮೊದಲ ಮುದ್ರಣವಾಗಿ ಪ್ರಕಟವಾಗಿರುವ ಬೇರಾವುದೇ ಭಾಷೆಯಿಂದ ಕನ್ನಡಕ್ಕೆ ಅಥವಾ ಕನ್ನಡದಿಂದ ಇಂಗ್ಲೀಷ್‌ಗೆ ಅನುವಾದವಾಗಿರುವ ಕೃತಿಗಳನ್ನು ಆಹ್ವಾನಿಸುತ್ತಿದೆ.

ಆಸಕ್ತ ಲೇಖಕರು ಪ್ರಕಟಗೊಂಡ ಕೃತಿಯ ಎರಡು ಪ್ರತಿಗಳನ್ನು ತಮ್ಮ ವಿವರಗಳ ಜೊತೆ ಗೌರವ ಕಾರ್ಯದರ್ಶಿ, ಬಿ.ಎಂ.ಶ್ರೀ. ಪ್ರತಿಷ್ಠಾನ, ೩ನೇ ಮುಖ್ಯರಸ್ತೆ, ನರಸಿಂಹರಾಜ ಕಾಲೋನಿ, ಬೆಂಗಳೂರು–೫೬೦೦೧೯, ಇವರಿಗೆ ಕಳುಹಿಸಬಹುದು. ಕೊನೆಯ ದಿನಾಂಕ : ೧೦ನೇ ಆಗಸ್ಟ್ ೨೦೧೮ ಸಂಪರ್ಕಿಸಿ : ೦೮೦–೨೬೬೧೫೮೭೭



**ಚಂದಾ ವಿವರಗಳು**

ವಾರ್ಷಿಕ ಚಂದಾ
ರೂ. ೨೦/–

ಐದು ವರ್ಷಗಳ ಚಂದಾ
ರೂ. ೧೦೦/–


ವಿಳಾಸ

**ಬಿ.ಎಂ.ಶ್ರೀ. ಪ್ರತಿಷ್ಠಾನ**
ಸ್ಥಾಪನೆ : ೦೬–೦೫–೧೯೭೯
ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರ
ಬಿ.ಎಂ.ಶ್ರೀ. ಕಲಾಭವನ,
೩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ
ಬೆಂಗಳೂರು – ೧೯
ದೂರವಾಣಿ:೨೬೬೧೫೮೭೭, ೨೬೬೭೬೭೭೩
ಇಮೇಲ್ : bmsritrust@gmail.com
web: www.bmshri.org
ಕಛೇರಿ ಸಮಯ:
ಮಧ್ಯಾಹ್ನ 12–30ರಿಂದ ಸಂಜೆ 7–30ಗಂಟೆ.
ವಾರದ ರಜೆ: ಮಂಗಳವಾರ

## ಸಂಪಾದಕೀಯ

ಬೆಂಗಳೂರಿನಂತಹ ಬೃಹತ್ ನಗರ ಒಂದು ಕೋಟಿಯಷ್ಟು ಜನಸಂಖ್ಯೆಯನ್ನು ಹೊಂದಿದ್ದು ಅವರಲ್ಲಿ ಕನಿಷ್ಠ ೨೦ ಲಕ್ಷ ಜನ ಕನ್ನಡಿಗರೇ ಆಗಿರುತ್ತಾರೆ.ಬೆಂಗಳೂರಿನ ವ್ಯಾಪ್ತಿಯಲ್ಲಿ ಸಾವಿರಾರು ಸಂಘ ಸಂಸ್ಥೆಗಳು ಸಕ್ರಿಯವಾಗಿ ಚಟುವಟಿಕೆಗಳನ್ನು ನಡೆಸಿಕೊಂಡು ಬರುತ್ತಿವೆ. ಇವುಗಳ ಪೈಕಿ ಸಾಹಿತ್ಯ, ಕಲೆ ಹಾಗೂ ಸಂಸ್ಕೃತಿಗೆ ಸಂಬಂಧಿಸಿದ ಚಟುವಟಿಕೆಗಳನ್ನು ನಡೆಸುವಂತಹ ಸಂಸ್ಥೆಗಳ ಸಂಖ್ಯೆಯೂ ದೊಡ್ಡದು. ಜೊತೆಗೆ ಬೆಂಗಳೂರು ಮಾನವ ಸಂಪನ್ಮೂಲ ಹಾಗೂ ವಿದ್ವಾಂಸರ ರಾಜಧಾನಿಯೂ ಆಗಿದ್ದು ಜೊತೆಗೆ ಬೆಂಗಳೂರಿಗೆ ಭೇಟಿ ನೀಡುವ ವಿದ್ವಾಂಸರ ಸಂಖ್ಯೆಯೂ ಹೆಚ್ಚು. ಬೆಂಗಳೂರು ಬಹಳಷ್ಟು ಉತ್ಪನ್ನಗಳಿಗೆ ಒಂದು ಬೃಹತ್ ಮಾರುಕಟ್ಟೆಯಾಗಿದ್ದು ಕನ್ನಡ ಸಾಹಿತ್ಯ, ಕಲೆ ಹಾಗೂ ಸಂಸ್ಕೃತಿಗೆ ಸಂಬಂಧಪಟ್ಟ ಎಲ್ಲಾ ರೀತಿಯ ಸರಕುಗಳು ಅಂದರೆ ಪುಸ್ತಕಗಳು, ಧ್ವನಿಮುದ್ರಿಕೆಗಳು,ವಿಡಿಯೋಗಳು ಇತ್ಯಾದಿಗಳಿಗೂ ಒಂದು ಬೃಹತ್ ಮಾರುಕಟ್ಟೆಯಾಗಿರುತ್ತದೆ. ಒಟ್ಟಿನಲ್ಲಿ ಬೆಂಗಳೂರಿನ ಹೆಗ್ಗಳಿಕೆ ಎಂದರೆ ಸಾಹಿತ್ಯಾಸಕ್ತರೂ ಹಾಗೂ ವಿದ್ವಾಂಸರು ಬಹು ದೊಡ್ಡ ಸಂಖ್ಯೆಯಲ್ಲಿ ಲಭ್ಯವಿರುವ ಪ್ರದೇಶವಾಗಿರುತ್ತದೆ.

ಪ್ರತಿ ದಿನವೂ ಹಲವಾರು ಸಂಘ ಸಂಸ್ಥೆಗಳು ಬಹಳಷ್ಟು ಶ್ರಮವಹಿಸಿ ಗಣನೀಯ ಮಟ್ಟದಲ್ಲಿ ಹಣವನ್ನು ವೆಚ್ಚ ಮಾಡಿ ಹಲವು ರೀತಿಯ ವೈವಿಧ್ಯಮಯ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿರುತ್ತವೆ. ಜ್ಞಾನ ಪ್ರಸರಣೆ, ಚಿಂತನೆ ಹಾಗೂ ಮನರಂಜನೆಗಳನ್ನು ಒದಗಿಸುವ ಸಲುವಾಗಿ ಕಾಳಜಿ ವಹಿಸಿ ಸಾಹಿತ್ಯಾಸಕ್ತರಿಗೆ ಸಂಘಟಕರು ಆಹ್ವಾನ ನೀಡಿ, ಪತ್ರಿಕೆಗಳಲ್ಲಿ ಪ್ರಚಾರ ನೀಡುವುದಲ್ಲದೇ ಹಾಜರಾಗುವವರಿಗೆ ಉಪಾಹಾರ/ಭೋಜನ ವ್ಯವಸ್ಥೆಗಳನ್ನು ಏರ್ಪಡಿಸಿರುತ್ತಾರೆ. ಇಷ್ಟಿದ್ದೂ ಬಹುತೇಕ ಕಾರ್ಯಕ್ರಮಗಳಲ್ಲಿ ಬೆರಳೆಣಿಕೆಯಷ್ಟು ಮಾತ್ರ ಸಾಹಿತ್ಯಾಸಕ್ತರ ಭಾಗವಹಿಕೆ ಕಂಡುಬರುತ್ತದೆ.

ಇದನ್ನು ದಿನವೂ ಅನುಭವಿಸುವ ಸಂಘಟಕರು ಹಾಗೂ ವಿದ್ವಾಂಸರು ಸಾಮಾನ್ಯ ಜನರ ಅಭಿರುಚಿ ಟಿವಿ ಹಾಗೂ ಕಂಪ್ಯೂಟರ್ ಗಳಿಗೆ ಮಾತ್ರ ಸೀಮಿತಗೊಂಡಿರುವ ಕಾರಣದಿಂದ ತಾವು ಸಂಘಟಿಸುವ ಕಾರ್ಯಕ್ರಮಗಳಲ್ಲಿ ಜನರು ಭಾಗವಹಿಸುತ್ತಿಲ್ಲ ಎಂದು ಕೊರಗುತ್ತಾರೆ.

ಆದರೆ ಪ್ರೇಕ್ಷಕ ವರ್ಗದವರ ಅಳಲು ಬೇರೆ. ಸಾಹಿತ್ಯಾಸಕ್ತರು ಯಾವುದೇ ಕಾರ್ಯಕ್ರಮದಲ್ಲಿ ಭಾಗವಹಿಸಲು ಸಾಕಷ್ಟು ಹಣ ಹಾಗೂ ಸಮಯವನ್ನು ಮೀಸಲಿಡಬೇಕಾಗುತ್ತದೆ. ಇಂದಿನ ದಿನದ ವೆಚ್ಚಗಳಲ್ಲಿ ಮನೆಯಿಂದ ಹೊರಟು ಒಂದು ಕಾರ್ಯಕ್ರಮದಲ್ಲಿ ಹಾಜರಾಗಿ ಮನೆಗೆ ಹಿಂದಿರುಗುವಲ್ಲಿ ಅವರಿಗೆ ಹಲವು ನೂರು ರೂಪಾಯಿಗಳು ಕೈ ಬಿಟ್ಟಿರುತ್ತವೆ ಹಾಗೂ ಸಿದ್ದತೆ ಮತ್ತು ಪ್ರಯಾಣಗಳಿಗಾಗಿಯೇ ಹಲವಾರು ಘಂಟೆಗಳಷ್ಟು ಸಮಯ ವ್ಯಯವಾಗಿರುತ್ತದೆ.ಸ್ವಂತ ವಾಹನ ಚಲಾಯಿಸುವವರ ಸಮಸ್ಯೆಗಳು ಒಂದು ರೀತಿಯದಾಗಿದ್ದರೆ ಸಾರ್ವಜನಿಕ ವಾಹನಗಳಲ್ಲಿ ಪ್ರಯಾಣಿಸುವವರಿಗೆ ಮತ್ತೊಂದು ರೀತಿಯದ್ದಾಗಿರುತ್ತದೆ.

ಇಷ್ಟೆಲ್ಲ ಕಷ್ಟ ಪಟ್ಟು ಉತ್ಸಾಹದಿಂದ ಹಾಜರಿ ಹಾಕಿದ ಆಸಕ್ತರಿಗೆ ಕೆಲವೊಮ್ಮೆ ನಿರಾಸೆಗಳುಂಟಾಗುತ್ತವೆ. ಕಾರ್ಯಕ್ರಮವನ್ನು ಸರಿಯಾದ ಸಮಯಕ್ಕೆ ಪ್ರಾರಂಭಿಸದಿರುವುದು, ಎರಡು ಮೂರು ಬಾರಿ ಪ್ರಾರ್ಥನೆ ಗೀತೆಗಳನ್ನು ಹಾಡಿಸುವುದು, ಲಂಬಿಸಿ ಮಾತನಾಡುವವರು, ನಿರೂಪಣೆ ಅಥವಾ ಸ್ವಾಗತ ಭಾಷಣ ಅಥವಾ ಪರಿಚಯ ಭಾಷಣಗಳನ್ನು ಮಾಡುವುದು, ಮಾಧ್ಯಮದವರ/ಇತರರ ಒತ್ತಾಯಕ್ಕಾಗಿ ಕಾರ್ಯಕ್ರಮದ ಸ್ವರೂಪವನ್ನೇ ಬದಲಿಸುವುದು, ಉಪನ್ಯಾಸಕಾರರು ಸೂಚಿಸಲಾದ ವಿಷಯದ ಬಗ್ಗೆ ಸಾಕಷ್ಟು ಸಿದ್ದತೆಗಳನ್ನು ಮಾಡಿಕೊಳ್ಳದೆ ಮುಖ್ಯ ವಿಷಯವನ್ನು ಬದಿಗೊತ್ತಿ ಸಂದರ್ಭಕ್ಕೆ ಅಪ್ರಸ್ತುತ ವಿಷಯಗಳಿಗೆ ಪ್ರಾಮುಖ್ಯತೆ ನೀಡುವುದು, ಇತ್ಯಾದಿ ನ್ಯೂನತೆಗಳು ಇದ್ದಲ್ಲಿ ಆಸಕ್ತರಿಗೆ ಸಾಕಷ್ಟು ನಿರಾಸೆಯಾಗುತ್ತದೆ.

ಹಲವಾರು ಬಾರಿ ಚಪ್ಪಾಳೆ ಹೊಡೆದು ಕಾರ್ಯಕ್ರಮವನ್ನು ಮುಗಿಸಿಕೊಂಡು ಮನೆಗೆ ಮರಳುವಾಗ ಇಷ್ಟು ಶ್ರಮವಹಿಸಿ ಹಾಜರಾದ ತನಗೆ ಈ ಕಾರ್ಯಕ್ರಮದಿಂದ ಎಷ್ಟು ಪ್ರಯೋಜನವಾಯಿತು ಎಂದು ಚಿಂತನೆ ಮಾಡುವುದು ಸಹಜ.ಎಷ್ಟೋ ಬಾರಿ ಸಂಘಟಕರ ಹೆಸರನ್ನು ನೋಡಿ ಅಥವಾ ಉಪನ್ಯಾಸಕಾರರ ಹೆಸರನ್ನು ನೋಡಿಯೇ ಕಾರ್ಯಕ್ರಮಗಳಿಗೆ ಹೋಗದಿರುವ ಉದಾಹರಣೆಗಳು ಅಪರೂಪವೇನಲ್ಲ.

ಈ ಪರಿಸ್ಥಿತಿಗಳನ್ನು ಕೂಲಂಕಷವಾಗಿ ಪರಿಶೀಲಿಸುವ ಕಾಲ ಬಂದಿರುತ್ತದೆ.ಸಂಘಟಕರು ಮೌಲಿಕ ಕಾರ್ಯಕ್ರಮಗಳನ್ನು ನೀಡದಿದ್ದಲ್ಲಿ ಆಸಕ್ತರು ಕಾರ್ಯಕ್ರಮಗಳಿಂದ ವಿಮುಖರಾಗುವ ಆತಂಕವಿರುತ್ತದೆ. ಅದೇ ರೀತಿ ಸಂಘಟಕರ ಇತಿಮಿತಿಗಳನ್ನು ಅರಿತುಕೊಂಡು ಸೂಕ್ತವಾಗಿ ಸ್ಪಂದಿಸಿ ಸಾಹಿತ್ಯ ಕಾರ್ಯಕ್ರಮಗಳಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಆಸಕ್ತರು ಭಾಗವಹಿಸದಿದ್ದಲ್ಲಿ ಕಾರ್ಯಕ್ರಮಗಳನ್ನು ನಡೆಸುವ ಉತ್ಸಾಹದ ಕೊರತೆ ಹಾಗೂ ಸಂಪನ್ಮೂಲಗಳ ಕೊರತೆಯ ಕಾರಣದಿಂದ ಸಂಘ ಸಂಸ್ಥೆಗಳು ಕಾರ್ಯಕ್ರಮಗಳನ್ನು ಸಂಘಟಿಸುವ ಧೈರ್ಯವನ್ನೇ ಮಾಡದಿರುವ ಸನ್ನಿವೇಶ ಉಂಟಾಗಬಹುದು.

ಪ್ರಸ್ತುತವಾಗಿ ಪ್ರದರ್ಶನ ಕಲೆಗಳಾದ ನಾಟಕ ವಿಮರ್ಶೆ, ಸಂಗೀತ ನೃತ್ಯಗಳ ವಿಮರ್ಶೆಗಳಂತಹ ರೀತಿಯಲ್ಲಿ ಸಾಹಿತ್ಯ ಕಾರ್ಯಕ್ರಮಗಳನ್ನು ಔಪಚಾರಿಕವಾಗಿ ವಿಮರ್ಶೆ ಮಾಡಿ ಪ್ರಕಟಿಸುವ ಪರಿಪಾಠ ಬೆಳೆದು ಬಂದಿರುವುದಿಲ್ಲ. ಗುಣಮಟ್ಟ ನಿಯಂತ್ರಣದ ಬಗ್ಗೆ ಹೆಚ್ಚು ಒಲವು ಇರುವ ಈ ಕಾಲಘಟ್ಟದಲ್ಲಿ ಸಾಹಿತ್ಯ ಕಾರ್ಯಕ್ರಮಗಳ ಗುಣಮಟ್ಟ ಮೌಲ್ಯೀಕರಣ ಮಾಡುವುದರ ಅಗತ್ಯ ಕಂಡುಬರುತ್ತಿದೆ.

ಜೊತೆಗೆ ತಂತ್ರಜ್ಞಾನದ ಬಳಕೆ ಪಡೆದು ಎಲ್ಲಾ ಮೌಲಿಕ ಕಾರ್ಯಕ್ರಮಗಳನ್ನು ಆಸಕ್ತರ ಟಿವಿ, ಕಂಪ್ಯೂಟರ್ ಹಾಗೂ ಮೊಬೈಲ್ ಗಳಲ್ಲಿ ವೀಕ್ಷಿಸುವ ಸೌಲಭ್ಯಗಳನ್ನು ಒದಗಿಸುವ ಕಾಲ ಇದಾಗಿರುತ್ತದೆ.

ಒಟ್ಟಿನಲ್ಲಿ ಸಾಹಿತ್ಯ ಕ್ಷೇತ್ರದ ಸರ್ವತೋಮುಖ ಬೆಳವಣಿಗೆಗೆ ಹಲವಾರು ರೀತಿಯ ಚಿಂತನೆಗಳ ಅಗತ್ಯ ಕಂಡುಬರುತ್ತಿವೆ.

**ಬಿ.ಆರ್ ರವೀಂದ್ರನಾಥ್**
**ಸಂಪಾದಕರು**

### ಆಗಸ್ಟ್ ತಿಂಗಳಿನಲ್ಲಿ ಜನಿಸಿದ ಸಾಹಿತ್ಯೋಪಾಸಕರು

| | |
|---|---|
| ಕಡೆಂಗೊಡ್ಲು ಶಂಕರ ಭಟ್ಟ | ೯-೮-೧೯೦೪ |
| ಎಂ.ಆರ್. ಶ್ರೀನಿವಾಸ ಮೂರ್ತಿ | ೨-೮-೧೮೯೨ |
| ಯಶವಂತ ಚಿತ್ತಾಲ | ೩-೮-೧೯೨೮ |
| ವಿಕೃ ಗೋಕಾಕ್ | ೯-೮-೧೯೦೯ |
| ಕೆ.ಜಿ. ಕುಂದಣಗಾರ | ೧೪-೮-೧೮೯೫ |
| ಮಿರ್ಜಿಅಣ್ಣರಾಯ | ೨೫-೮-೧೯೧೮ |

### ಆಗಸ್ಟ್ ತಿಂಗಳಿನಲ್ಲಿ ನಿಧನರಾದ ಸಾಹಿತ್ಯೋಪಾಸಕರು

| | |
|---|---|
| ಮಧುರ ಚೆನ್ನ | ೧೫-೮-೧೯೫೩ |
| ಸುರಂ ಎಕ್ಕುಂಡಿ | ೨೦-೮-೧೯೯೫ |
| ತಸು ಶಾಮರಾಯರು | ೨೧-೮-೧೯೯೮ |
| ಕೆ.ಜಿ ಕುಂದಣಗಾರ | ೨೨-೮-೧೯೬೫ |
| ಚನ್ನಪ್ಪ ಉತ್ತಂಗಿ | ೨೮-೮-೧೯೬೨ |

# ಆಗಸ್ಟ್ ೨೦೧೮ ರಲ್ಲಿ ಆಯೋಜಿಸಲಾಗಿರುವ ಕಾರ್ಯಕ್ರಮಗಳು
## ಸ್ಥಳ : ಎಂ.ವಿ.ಸೀ. ಸಭಾಂಗಣ, ಬಿಎಂಶ್ರೀ ಪ್ರತಿಷ್ಠಾನ

**೦೮-೦೮-೨೦೧೮ ಬುಧವಾರ ಸಂಜೆ - ೪-೦೦ಗಂಟೆಗೆ**



**ಸಾಹಿತ್ಯ ಸಂಚಲನ - ೨**

ಬಿ.ಎಂ.ಶ್ರೀ ಪ್ರತಿಷ್ಠಾನದ ಸಹಯೋಗದಲ್ಲಿ
ಕರ್ನಾಟಕ ಲೇಖಕಿಯರ ಸಂಘದ ಕಾರ್ಯಕ್ರಮ
ಮುಖ್ಯ ಅತಿಥಿ : ಶ್ರೀಮತಿ ಭುವನೇಶ್ವರಿ ಹೆಗಡೆ
ಖ್ಯಾತ ಹಾಸ್ಯ ಸಾಹಿತಿ
ಉಪನ್ಯಾಸದ ವಿಷಯ : ನಗೆ ಚಿಮ್ಮುವ ಬಗೆ

**೦೯-೦೮-೨೦೧೮ ಗುರುವಾರ ಸಂಜೆ- ೬-೦೦ ಗಂಟೆಗೆ**



**"ಅಕ್ಕರಗೊಟ್ಟಿ"-೪೦**

ತಿಂಗಳ ಮುಕ್ತ ಸಂಸ್ಕೃತಿ ಚಿಂತನೆ
ವಿಷಯ : ೭೦ನೇ ದಶಕದ ಹಿಂದಿನ ರಂಗಪ್ರಯೋಗದ ಚಟುವಟಿಕೆಗಳು.
ಚಾಲನೆ ನೀಡುವವರು : ಶ್ರೀಪತಿ ಮಂಜನಬೈಲು
ರಂಗತಜ್ಞರು

**೧೩-೮-೨೦೧೮ ಸೋಮವಾರ ಸಂಜೆ - ೬-೦೦ಗಂಟೆಗೆ**



**ಎ.ಸುಬ್ಬಯ್ಯ ಹೆಗಡೆಶಾಸ್ತ್ರಿ, ಯಂ.ಕೆ. ವಿಜಯಲಕ್ಷ್ಮಿ, ಎನ್.ಅನಂತರಂಗಾಚಾರ್,**
**ಅನಂತರಂಗ ಪ್ರತಿಷ್ಠಾನ ದತ್ತಿ ಉಪನ್ಯಾಸ**

ಉಪನ್ಯಾಸಕರು : ಡಾ॥ ರಾಮಕೃಷ್ಣ
ಪ್ರಾಧ್ಯಾಪಕರು, ಎಂ.ಇ.ಎಸ್. ಸ್ನಾತಕೋತ್ತರ ಪದವಿಕಾಲೇಜು
ವಿಷಯ : ಬ್ರಹ್ಮಶಿವನ ಸಮಯ ಪರೀಕ್ಷೆ-ಒಂದು ಅವಲೋಕನ.

**೨೫-೦೮-೨೦೧೮ ಶನಿವಾರ ಸಂಜೆ ೬-೦೦ ಗಂಟೆಗೆ**

**ಶ್ರೀಮತಿ ರುಕ್ಮಿಣಮ್ಮ ಸೀತಾರಾಮರಾವ್ ದತ್ತಿ ಉಪನ್ಯಾಸ**

ಉಪನ್ಯಾಸ : ಶ್ರೀ ಗುರುಪ್ರಸಾದ್ ಬಿ.ಎಸ್.
ವಿಷಯ : 'ಚಾರಣ'-ಆಕರ್ಷಣೆ ಮತ್ತು ಅಪಾಯಗಳು

**೩೦-೦೮-೨೦೧೮ ಬುಧವಾರ ಸಂಜೆ ೬-೦೦ ಗಂಟೆಗೆ**

**'ಸಾಹಿತ್ಯ ವಿಹಾರ'-೬**

ಸಾಕ್ಷ್ಯಚಿತ್ರ ಪ್ರದರ್ಶನ

## ಗುರುತಿನ ಚೀಟಿಗಳು - ಮಾನ್ಯ ಸದಸ್ಯರ ಗಮನಕ್ಕೆ

ಪ್ರತಿಷ್ಠಾನದ ಹಲವಾರು ಸದಸ್ಯರು ಗುರುತಿನ ಚೀಟಿಗಳನ್ನು ಪಡೆದುಕೊಂಡಿರುವುದಿಲ್ಲ. ೨೦೧೮ನೇ ಇಸವಿಯ ಸರ್ವ ಸದಸ್ಯರ ಸಭೆಯಲ್ಲಿ ಹಾಜರಾಗಲು ಹಾಗೂ ಚುನಾವಣೆಯ ಪ್ರಕ್ರಿಯೆಯಲ್ಲಿ ಭಾಗವಹಿಸಲು ಸದಸ್ಯತ್ವದ ಗುರುತಿನ ಚೀಟಿಯನ್ನು ಹಾಜರುಪಡಿಸುವುದು ಕಡ್ಡಾಯವಾಗಿರುತ್ತದೆ.

ಆದ್ದರಿಂದ ಗುರುತಿನ ಚೀಟಿ ಪಡೆದುಕೊಂಡಿಲ್ಲದ ಸದಸ್ಯರು ಕಚೇರಿ ವೇಳೆಗಳಲ್ಲಿ ಗುರುತಿನ ಚೀಟಿಗಳನ್ನು ಆದಷ್ಟೂ ಬೇಗನೆ ಪಡೆಯಬೇಕೆಂದು ಕೋರಿಕೊಳ್ಳುತ್ತೇವೆ.

# ಬಿ.ಎಂ.ಶ್ರೀ ಪ್ರತಿಷ್ಠಾನದ ಕಾರ್ಯಕ್ರಮಗಳು

**೦೬-೦೭-೨೦೧೮**

**"ಅಕ್ಕರಗೊಟ್ಟಿ"-೩೯**

**ತಿಂಗಳ ಮುಕ್ತ ಸಂಸ್ಕೃತಿ ಚಿಂತನೆ**

**ವಿಷಯ : 'ಕವಿರಾಜ ಮಾರ್ಗ'ದಲ್ಲಿ ಉಕ್ತವದ 'ಗದ್ಯಕಥಾ' ಒಂದು ವಿವರಣೆ**

**ಚಾಲನೆ ನೀಡಿದವರು : ಡಾ॥ ಪಿ.ವಿ.ನಾರಾಯಣ**



""ಕವಿರಾಜ ಮಾರ್ಗವು' ಕನ್ನಡದ ಪ್ರಾಚೀನ ಮೊದಲನೇ ಉಪಲಬ್ದ ಕೃತಿ.ಪ್ರೊ. ಎಂ.ವಿ. ಸೀತಾರಾಮಯ್ಯನವರು ಸಂಪಾದಿಸಿರುವ ಕವಿರಾಜ ಮಾರ್ಗ ಒಂದು ಶ್ರೇಷ್ಠಕೃತಿ ಮತ್ತು ಅವರ ಬಹುಮುಖ ಪ್ರತಿಭೆಗೆ ಸಾಕ್ಷಿ. ಅವರು ಸದಾಕಾಲ ವಂದನೀಯರು" ಹೀಗೆಂದು ಹೇಳಿ ಚರ್ಚೆಗೆ ಚಾಲನೆ ನೀಡಿದ ಡಾ.ಪಿ.ವಿ.ನಾರಾಯಣ ಅವರು ರಾಷ್ಟ್ರಕೂಟ ವಂಶದ ದೊರೆ ನೃಪತುಂಗನ ಆಸ್ಥಾನ ಕವಿ ಶ್ರೀ ವಿಜಯನೇ ಇದರ ಕರ್ತೃ ಎಂಬುದು ನಿರ್ವಿವಾದವೆಂಬ ಪ್ರಸ್ತಾವನೆಯೊಂದಿಗೆ ವಿಷಯವನ್ನು ಆರಂಭಮಾಡಿ ಇದು ಅಲಂಕಾರ ಶಾಸ್ತ್ರಕ್ಕೆ ಸಂಬಂಧಿಸಿದ ಲಕ್ಷಣ ಗ್ರಂಥ ಮತ್ತು ಆ ಕಾಲದ ಸಂಸ್ಕೃತ-ಕನ್ನಡದ ಸಂಬಂಧವನ್ನು ಸೂಕ್ಷ್ಮವಾಗಿ ತಿಳಿಸಿ, ನಂತರ ಇಂದಿನ ವಿಷಯವಾದ 'ಗದ್ಯಕಥಾ' ಉಲ್ಲೇಖವಿರುವ ಪದ್ಯ ೨೭ಅಧಿಕರಣ ೧ ರ ಪದ್ಯವನ್ನು, ಓದಿ ಪದ ವಿಭಾಗ ಮಾಡಿ ಅರ್ಥೈಸಿದರು.

ಹಿಂದಿನ ಆಚಾರ್ಯರ ಅಭಿಪ್ರಾಯದಂತೆ 'ಗದ್ಯಪದ್ಯ ಸಮ್ಮಿಶ್ರಿತ'ವಾದ ಒಂದು ಪ್ರಕಾರವೇ ಗದ್ಯಕಥೆ ಎಂಬುದಾಗಿ ನಿರ್ಧರಿಸಿದೆ ಎಂದು ಮಾರ್ಗಕಾರನ ಹೇಳಿಕೆ. ಇದು ಕನ್ನಡ ಕಾವ್ಯ ಪ್ರಕಾರಗಳಲ್ಲಿ ಒಂದು ಎಂದು ಕರೆದಿದ್ದಾನೆ. ಲಾಕ್ಷಣಿಕ ಕಾವ್ಯದ ಬಗ್ಗೆ 'ಪದ್ಯಂ ಗದ್ಯಂ ಚ ಮಿಶ್ರಂಚ ತತ್ ತ್ರಿಧೈವ ವ್ಯವಸ್ಥಿತಮ್' ಎಂದು ಮೂರನೆ ಪ್ರಕಾರವನ್ನು ಉದ್ಧರಿಸಿದ್ದಾನೆ. ಆದರೆ ನಮ್ಮ ಕನ್ನಡದ ಶ್ರೀವಿಜಯನು ಇದನ್ನು 'ಕನ್ನಡ ಗಬ್ಬ" ವೆಂದು ಹೇಳಿದ್ದಾನೆ. ಹಾಗಿದ್ದಲ್ಲಿ ಈ ಪ್ರಕಾರದ ಸ್ವರೂಪವೇನು? ಸಂಸ್ಕೃತ ಕವಿ ದಂಡಿಗೂ ಪೂರ್ವದಲ್ಲಿ ಚಂಪೂಕಾವ್ಯಗಳ ಉಲ್ಲೇಖವಿಲ್ಲದಿರುವುದರಿಂದ ಗದ್ಯದ ಕಥೆ ಮತ್ತು ಗದ್ಯದ ಪ್ರಾಚುರ್ಯದಿಂದಾಗಿ ಈ ಪ್ರಕಾರವನ್ನೇ ಗದ್ಯಕಥೆ ಎಂದು ಕರೆದಿರುವ ಸಾಧ್ಯತೆ ಇರುವುದಾಗಿ ತಿಳಿಸಿದರು.

ಶಿವಕೋಟಿ ಆಚಾರ್ಯ ವಿರಚಿತ ವಡ್ಡಾರಾಧನೆಯನ್ನು ಗಮನಿಸಿದರೆ, ಕವಿರಾಜ ಮಾರ್ಗಕಾರ ಹೇಳಿರುವ ಗದ್ಯಕಥೆಯ ಲಕ್ಷಣಗಳನ್ನು ಇಲ್ಲೂ ಕಾಣಬಹುದಾಗಿ, ವಡ್ಡಾರಾಧನೆಯು ಈ ಪ್ರಕಾರದ ವ್ಯಾಪ್ತಿಗೆ ಒಳಪಡುವ ಕೃತಿಯೆಂದು ನಿರ್ಧರಿಸಬಹುದೆಂದು ತಮ್ಮ ಅಭಿಪ್ರಾಯವನ್ನು ಕೆಲವು ಉದಾಹರಣೆಗಳ ಜೊತೆಗೆ ನಿರೂಪಿಸಿದರು.

ಹಲವು ವಿದ್ವಾಂಸರು ಈ ಕೃತಿಯ ಹೆಸರು "ಆರಾಧನಾ ಕರ್ಣಾಟಕ ಟೀಕಾ" ಎಂದೂ ಲೇಖಕ ಭ್ರಾಜಿಷ್ಣು ಎಂದೂ, ಕೃತಿಯ ಕಾಲ ಕ್ರಿ.ಶ ೮೦೦-೮೭೦ರ ನಡುವಣ ಅವಧಿಯದು ಎನ್ನುತ್ತಾರೆ.

ಚರ್ಚೆಯಲ್ಲಿ ಭಾಗವಹಿಸಿದ ಹಿರಿಯ ಕನ್ನಡ ವಿದ್ವಾಂಸರಾದ ಡಾ॥ ಕೆ.ಆರ್.ಗಣೇಶ್ ಅವರು ದುರ್ಗಸಿಂಹನ ಪಂಚತಂತ್ರವು ಈ ಗದ್ಯ ಕಥಾವ್ಯಾಪ್ತಿಗೆ ಹೆಸರಿಸಬಹುದಾದ ಕೃತಿ ಮತ್ತು ಈ ನಿಟ್ಟಿನಲ್ಲಿ ವಿದ್ವಾಂಸರು ಸಂಶೋಧನೆ ನಡೆಸಬಹುದೆಂದು ಸಲಹೆ ನೀಡಿದರು.

ಕಾರ್ಯಕ್ರಮದ ಪ್ರಾರಂಭದಲ್ಲಿ ಶ್ರೀ ಬಿ.ಎಸ್. ಗುರುಪ್ರಸಾದ್ ಔಪಚಾರಿಕವಾಗಿ ಅಧ್ಯಕ್ಷರ ಪರಿಚಯವನ್ನು ಮಾಡಿದರು ಹಾಗೂ ಚರ್ಚೆಯಲ್ಲಿ ಭಾಗವಹಿಸಲು ಬಂದಿದ್ದ ಎಲ್ಲಾ ವಿದ್ವಾಂಸರನ್ನು ಸಭೆಗೆ ಸ್ವಾಗತಿಸಿದರು.

ಕಾರ್ಯಕ್ರಮದ ಕೊನೆಯಲ್ಲಿ ಭಾಗವಹಿಸಿದ ಎಲ್ಲಾ ವಿದ್ವಾಂಸರಿಗೂ ವಂದಿಸಿ ಕಾರ್ಯಕ್ರಮವನ್ನು ಮುಕ್ತಾಯಗೊಳಿಸಲಾಯಿತು

**೧೧-೭-೨೦೧೮**

**ಡಿ.ಲಿಂಗಯ್ಯ, ರಾಸ ಸಾಹಿತ್ಯ. ಟಿ.ಎಸ್. ವೆಂಕಣ್ಣಯ್ಯ, ತೀ.ನಂ.ಶ್ರೀ, ಶಾರದಮ್ಮ ಹನುಮಯ್ಯ ದತ್ತಿ ಉಪನ್ಯಾಸ**

**ವಿಷಯ : ಬೇಂದ್ರೆಯವರ ಶಬ್ದಲೋಕ**

**ಉಪನ್ಯಾಸಕರು : ಶ್ರೀ.ಜಿ. ಕೃಷ್ಣಪ್ಪ (ವಿದ್ವಾಂಸರು)**




ಕಾರ್ಯಕ್ರಮದ ಪ್ರಾರಂಭದಲ್ಲಿ ಡಾ.ಪಿ.ವಿ.ನಾರಾಯಣ ಅವರು ಸಭೆಗೆ ಉಪನ್ಯಾಸಕರನ್ನು ಪರಿಚಯಿಸಿ, ಉಪನ್ಯಾಸಕರನ್ನೂ ಮತ್ತು ಬೇಂದ್ರೆ ಅಭಿಮಾನಿಗಳನ್ನೂ ಸ್ವಾಗತಿಸಿದರು.

ಈ ಉಪನ್ಯಾಸದಲ್ಲಿ ಶ್ರೀಕೃಷ್ಣಪ್ಪನವರು ಬೇಂದ್ರೆಯವರ ಕಾವ್ಯದಲ್ಲಿ ಕಾಣಬಹುದಾದ ನಾಲ್ಕು ನೆಲೆಗಳನ್ನು ಪರಿಚಯಮಾಡಿದರು.ಭವ, ಭಾವ, ಅನುಭವ ಮತ್ತು ಅನುಭಾವ ಇವೇ ಆ ನಾಲ್ಕುನೆಲೆಗಳು.ಬೇಂದ್ರೆಯವರ ಪದಗಳ ಬಳಕೆಯಲ್ಲಿ ಸಂಸ್ಕೃತಿಯ ಪರಿಚಯವನ್ನು, ನಿಧಾನವಾಗಿ ಗೋಚರಿಸುವ ಆತ್ಮದ ಅರಿವನ್ನೂ ಉದಾಹರಣೆಯೊಂದಿಗೆ ತಿಳಿಸಿದರು.ಬೇಂದ್ರೆಯವರು ಮೌಲ್ಯಯುತವಾದ ಜೀವನವನ್ನು ಆದರ್ಶವಾಗಿಟ್ಟು ಕೊಂಡವರು. ಇಂದಿನ ವಿದ್ಯಾರ್ಥಿಗಳು ಮತ್ತು ಕಲೆ ಹಾಗೂ ಕಾವ್ಯಾಭಿಮಾನಿಗಳೂ ಸಹ ಬೇಂದ್ರೆಯವರನ್ನು ಅನುಸರಿಸಿದರೆ, ಕನ್ನಡ ಸಾರಸ್ವತಲೋಕ ಮತ್ತಷ್ಟು ಸಮೃದ್ಧಿ ಹೊಂದುವುದೆಂಬ ಆಶಯದೊಂದಿಗೆ ಬೇಂದ್ರೆ ಶಬ್ದಲೋಕ ಕಾರ್ಯಕ್ರಮ ಮುಕ್ತಾಯಗೊಂಡಿತು.

ಶ್ರೀ ಬಿ.ಎಸ್. ಗುರುಪ್ರಸಾದ್ ಅವರು ಎಲ್ಲರಿಗೂ ವಂದಿಸಿದರು.

ಸಾಹಿತ್ಯವಿಹಾರ-೪

೨೫-೬-೨೦೧೮ ರಂದು ಸಾಹಿತ್ಯವಿಹಾರ-೪ ಕಾರ್ಯಕ್ರಮದಲ್ಲಿ ಎಚ್. ಎಸ್. ಪಾರ್ವತಿ ಮತ್ತು ಎನ್. ಪಂಕಜ ಅವರ ಸಾಕ್ಷ್ಯಚಿತ್ರ ತೋರಿಸಲಾಯಿತು.



# ಬಿ.ಎಂ.ಶ್ರೀ. ಪ್ರತಿಷ್ಠಾನ (ರಿ.)

**ಬಿ.ಎಂ.ಶ್ರೀ ಕಲಾಭವನ,** 3ನೇ ಮುಖ್ಯರಸ್ತೆ,
ನರಸಿಂಹರಾಜ ಕಾಲೋನಿ, ಬೆಂಗಳೂರು–560 019
ದೂರವಾಣಿ : 26615877, 26676773

ಸ್ಥಾಪನೆ : 06–05–1979

## 38ನೇ ಸರ್ವ ಸದಸ್ಯರ ಸಭೆಯ ತಿಳಿವಳಿಕೆ ಪತ್ರ

ಮಾನ್ಯರೇ,

ಬಿ.ಎಂ.ಶ್ರೀ. ಪ್ರತಿಷ್ಠಾನದ ಮೂವತ್ತೆಂಟನೆ ಸರ್ವಸದಸ್ಯರ ಸಭೆಯನ್ನು **ದಿನಾಂಕ: 12–08–2018ರಂದು ಭಾನುವಾರ** ಬೆಳಗ್ಗೆ 10–30ಕ್ಕೆ ಡಾ. ಪಿ.ವಿ. ನಾರಾಯಣ ಅವರ ಅಧ್ಯಕ್ಷತೆಯಲ್ಲಿ ಪ್ರತಿಷ್ಠಾನದಲ್ಲಿ ನಡೆಸಲಾಗುತ್ತದೆ. ತಾವು ದಯವಿಟ್ಟು ಸಕಾಲಕ್ಕೆ ಆಗಮಿಸಿ ಸಭೆಯ ಕಾರ್ಯಕಲಾಪಗಳನ್ನು ನಡೆಸಿಕೊಡಬೇಕಾಗಿ ವಿನಂತಿಸುತ್ತೇವೆ.

**ಕಾರ್ಯಸೂಚಿ**

1. ಸ್ವಾಗತ.
2. ಅಗಲಿದವರಿಗೆ ಶ್ರದ್ಧಾಂಜಲಿ
3. ಸರ್ವ ಸದಸ್ಯರ ಸಭೆಯ ತಿಳಿವಳಿಕೆ ಪತ್ರವನ್ನು ಓದಿ ಸ್ಥಿರೀಕರಿಸುವುದು.
4. ಹಿಂದಿನ ಸರ್ವ ಸದಸ್ಯರ ಸಭೆಯ ನಡಾವಳಿಯನ್ನು ಅನುಮೋದಿಸುವುದು.
5. 2017–18ನೇ ಸಾಲಿನ ಆಡಳಿತ ವರದಿಯನ್ನು ಅಂಗೀಕರಿಸುವುದು.
6. 2017–18ನೇ ಸಾಲಿನ ಲೆಕ್ಕಪರಿಶೋಧಕರು ನೀಡಿರುವ ಆಯ–ವ್ಯಯ ಲೆಕ್ಕ ತಃಖ್ತೆಗಳನ್ನು ಅನುಮೋದಿಸುವುದು.
7. 2018–19ನೇ ಸಾಲಿನ ಅಂದಾಜಿನ ಆಯ–ವ್ಯಯ ಪಟ್ಟಿಯನ್ನು ಅನುಮೋದಿಸುವುದು.
8. 2018–19ನೇ ಸಾಲಿಗೆ ಲೆಕ್ಕ ಪರಿಶೋಧಕರ ನೇಮಕ ಮಾಡುವುದು.
9. ಈ ಸಾಲಿನಲ್ಲಿ ನಿವೃತ್ತರಾಗಲಿರುವ ಕಾರ್ಯಕಾರಿ ಸಮಿತಿ ಸದಸ್ಯರ ಸ್ಥಾನಗಳಿಗೆ ಚುನಾವಣೆ ನಡೆಸುವುದು.*
10. ಸದಸ್ಯರು ಕಳುಹಿಸಿರುವ ಸಲಹೆ ಸೂಚನೆಗಳ ಪರಿಶೀಲನೆ
11. ಇತರೆ ವಿಚಾರಗಳು (ಅಧ್ಯಕ್ಷರ ಒಪ್ಪಿಗೆ ಪಡೆದು).
12. ಅಧ್ಯಕ್ಷರ ಭಾಷಣ
13. ವಂದನಾರ್ಪಣೆ.

ದಿನಾಂಕ: 18–07–2018

**ಕಾರ್ಯಕಾರಿ ಸಮಿತಿಯ ಅಪ್ಪಣೆಯ ಮೇರೆಗೆ**

| | |
|---|---|
| ಸಹಿ | ಸಹಿ |
| **ಬಿ.ಆರ್. ರವೀಂದ್ರನಾಥ್** | **ಡಾ॥ ವಿಜಯಾ ಸುಬ್ಬರಾಜ್** |
| ಗೌರವ ಕಾರ್ಯದರ್ಶಿ | ಗೌರವ ಕಾರ್ಯದರ್ಶಿ |

**ಚುನಾವಣೆ ವೇಳಾಪಟ್ಟಿ**

| | | |
|---|---|---|
| * ನಾಮ ಪತ್ರಗಳನ್ನು ಸಲ್ಲಿಸಲು ಪ್ರಾರಂಭದ | ದಿನಾಂಕ | 22–07–2018 |
| * ನಾಮ ಪತ್ರಗಳನ್ನು ಸಲ್ಲಿಸಲು ಕೊನೆಯ | ದಿನಾಂಕ | 28–07–2018 |
| * ನಾಮ ಪತ್ರಗಳ ಪರಿಶೀಲನೆ | ದಿನಾಂಕ | 30–07–2018 |
| * ಚುನಾವಣೆಗೆ ಸ್ಪರ್ಧಿಸುವ ಅಭ್ಯರ್ಥಿಗಳ ಪಟ್ಟಿಯನ್ನು ಪ್ರಕಟಿಸುವ | ದಿನಾಂಕ | 01–08–2018 |
| * ಉಮೇದುವಾರಿಕೆ ಹಿಂಪಡೆಯುವ | ದಿನಾಂಕ | 03–08–2018 |
| * ಚುನಾವಣೆಗೆ ಸ್ಪರ್ಧಿಸುವ ಅಭ್ಯರ್ಥಿಗಳ ಅಂತಿಮ ಪಟ್ಟಿ ಪ್ರಕಟಿಸುವ | ದಿನಾಂಕ | 05–08–2018 |
| * ಚುನಾವಣೆ | ದಿನಾಂಕ | 12–08–2018 |

*ಈ ಸಾಲಿನಲ್ಲಿ ನಿವೃತ್ತರಾಗಲಿರುವ ಕಾರ್ಯಕಾರಿ ಸಮಿತಿ ಸದಸ್ಯರುಗಳ ಹೆಸರು

ಡಾ॥ ನಂಜುಂಡಸ್ವಾಮಿ, ಶ್ರೀ ವೈ.ಎನ್.ಶರ್ಮಾ, ಶ್ರೀ ಎಸ್.ವಿ. ಶ್ರೀನಿವಾಸಮೂರ್ತಿ, ಶ್ರೀಮತಿ ಎಂ.ಕೆ. ರಮಾದೇವಿ

**ವಿಶೇಷ ಸೂಚನೆ**

1. ಸದಸ್ಯರು ಬರುವಾಗ ತಮ್ಮ ಗುರುತಿನ ಚೀಟಿಯನ್ನು ಕಡ್ಡಾಯವಾಗಿ ತರತಕ್ಕದ್ದು. ಗುರುತಿನ ಚೀಟಿಯನ್ನು ಪಡೆದಿಲ್ಲದವರು ದಿನಾಂಕ: 05–08–2018ರ ಒಳಗೆ ಗುರುತಿನ ಚೀಟಿಯನ್ನು ಪಡೆಯಬಹುದು..
2. ಸದಸ್ಯರು ಕಳುಹಿಸುವ ಸಲಹೆ ಸೂಚನೆಗಳು ಒಂದು ವಾರಕ್ಕೆ ಮುಂಚೆ ಕಛೇರಿಗೆ ತಲುಪಬೇಕು.
3. ಆಯ–ವ್ಯಯ ಲೆಕ್ಕ ವಿವರ ಮತ್ತು ಆಡಳಿತ ವರದಿಯ ಪ್ರತಿಗಳನ್ನು ಪ್ರತಿಷ್ಠಾನದ ಕಛೇರಿ ಸಮಯದಲ್ಲಿ ಪರಿಶೀಲಿಸಬಹುದು.
4. ಚುನಾವಣೆ ನಡೆಯುವ ಸಮಯ 10.30ರಿಂದ 12.30ರ ವರೆಗೆ.

ಪ್ರತಿಷ್ಠಾನದ ಸದಸ್ಯರಿಗೆ ಮಾತ್ರ ಪ್ರವೇಶ




**ಪಂಚಮಹಾವಾದ್ಯ:** ದೇವಸ್ಥಾನಗಳಲ್ಲಿಯೂ ಮಹಾಗಣ್ಯರ ಸ್ವಾಗತಕ್ಕೂ ಬಳಸುತ್ತಿದ್ದ ಐದು ವಾದ್ಯಗಳನ್ನು 'ಪಂಚಮಹಾವಾದ್ಯ' ಅಥವಾ 'ಪಂಚವಾದ್ಯ'ಗಳೆಂದು ಕರೆಯುವುದು ರೂಢಿ.ಇದನ್ನು 'ಪಂಚಮಹಾಶಬ್ದ' ಎಂಬ ಮಾತಿನಿಂದಲೂ ಕರೆಯಲಾಗುತ್ತಿತ್ತು.ಕನ್ನಡ ನಾಡಿನ ಪ್ರಾಚೀನ ಶಾಸನಗಳಲ್ಲಿ ರಾಜರುಗಳನ್ನು ಹಲವು ವೇಳೆ 'ಸಮಧಿಗತಪಂಚಮಹಾಶಬ್ದ' ಎಂಬ ವಿಶೇಷಣದಿಂದ ವರ್ಣಿಸಲಾಗಿದೆ. "ಸ್ವಸ್ತಿ ಸಮಧಿಗತ ಪಞ್ಚಮಹಾಶಬ್ದ ಮಹಾಸಾಮನ್ತಾಧಿಪತಿ ಪ್ರಭೂತ ವರಿಷ ಶ್ರೀಮಾನ್ಗೋಯಿನ್ದರಸರ್" ಎಂಬ ಒಕ್ಕಣೆ ಎಂಟನೆಯ ಶತಮಾನದ ಶಾಸನದಲ್ಲಿದೆ."ಸಮನೆನಿಸುವರ್ ಪ್ರಶಸ್ತಿಕ್ರಮದೊಳ್ ಸ್ವಸ್ತಿ ಸಮಧಿಗತ ಪಂಚಮಹಾಶಬ್ದ ಮಹಾಸಾಮಂತರೆನಲ್ ಸಮನೆನಿಪರೆ ಗುಣದೊಳರಿಗನೊಳ್ ಸಾಮಂತರ್" ಎಂಬುದು 'ಪಂಪಭಾರತ'ದಲ್ಲಿ ಅರಿಕೇಸರಿಯನ್ನು ವರ್ಣಿಸುವ ಪದ್ಯ. ದೊಡ್ಡವರನ್ನು ಸನ್ಮಾನ ಮಾಡುವ ರೀತಿಯೂ ಇದೇ ಅಗಿದ್ದಿತೆಂದು ಕಾಣುತ್ತದೆ: ಏಕೆಂದರೆ ಬಸವಣ್ಣನ ವಚನವೊಂದು "ಹೊಲೆಯ ಮಾದಿಗ ಭಕ್ತನಾದಡೆ ಆತನ ಮನೆಯ ಸೊಣಗಂಗೆ ಪಂಚಮಹಾವಾದ್ಯದಲಿ ಸನ್ಮಾನವ ಮಾಡೆನೆ?" ಎಂಬ ಮಾತಿದೆ.

'ಪಂಚಮಹಾವಾದ್ಯ'ಗಳೆಂದು ಕರೆದರೂ ಎಲ್ಲ ಕಾಲಗಳಲ್ಲಿಯೂ ಮತ್ತು ಸ್ಥಳಗಳಲ್ಲಿಯೂ ಐದು ವಾದ್ಯಗಳ ಪಟ್ಟಿ ಒಂದೇ ಆಗಿರದೆ, ವ್ಯತ್ಯಾಸಗೊಂಡಿರುವುದನ್ನು ಗುರುತಿಸಬಹುದು. ನಂಜನಗೂಡಿನ ಶಾಸನವೊಂದು ತಿವಿರಿ, ದಟ್ಟ, ಖಂಡಿಕ್ಕೆ, ಜಯಗಂಟೆ ಮತ್ತು ಕಾಳೆಗಳನ್ನು 'ಪಂಚಮಹಾವಾದ್ಯ'ಗಳೆಂದು ಹೆಸರಿಸಲಾಗಿದೆ. 'ವಿವೇಕ ಚಿಂತಾಮಣಿ'ಯು ಶೃಂಗ, ತಮ್ಮಟ, ಶಂಖ, ಭೇರಿ, ಜಯಗಂಟೆಗಳನ್ನು 'ಪಂಚಮಹಾವಾದ್ಯ'ಗಳೆಂದು ಹೇಳಿದೆ.ಕೆಲವು ವೇಳೆ ನಾಲ್ಕು ವಾದ್ಯಗಳೊಡನೆ ಮನುಷ್ಯ ಧ್ವನಿಯೂ ಸೇರುತ್ತಿತ್ತೆಂದು ಕೆವು ವಿದ್ವಾಂಸರು ಅಭಿಪ್ರಾಯಪಡುತ್ತಾರೆ.

ಕೇವಲ ಸಾರ್ವಜನಿಕ ಸನ್ಮಾನಗಳಲ್ಲಿ ಮಾತ್ರವಲ್ಲದೆ ಬೇರೆ ಸಂದರ್ಭದಲ್ಲಿಯೂ ಬಳಸುತ್ತಿದ್ದ ಐದು ವಾದ್ಯಗಳ ಸಮೂಹವನ್ನು ಈ ಮಾತಿನಿಂದ ಕರೆಯುತ್ತಿದ್ದರು: 'ಆದಿಪುರಾಣ'ದಲ್ಲಿ ಪಂಪನು ಭರತ ಚಕ್ರವರ್ತಿಯು ಬೆಳಿಗ್ಗೆ ಏಳುವ ಹೊತ್ತಿಗೆ "ಪಂಚಮಹಾವಿಜೃಂಭಿತಧ್ವನಿ ಲಸದ್ಗಾಂಧಾರನಾದಂ" ಎಂದು ವರ್ಣಿಸುವುದರಿಂದ ಅರಮನೆಯಲ್ಲಿ ಬೆಳಿಗ್ಗೆ ಈ ವಾದ್ಯಗಳ ಧ್ವನಿಯನ್ನು ಮಾಡಲಾಗುತ್ತಿತ್ತೆಂದು ಭಾವಿಸಬಹುದು. ಇವುಗಳ ಜೊತೆಗೆ ಇತರ ವಾದ್ಯಗಳೂ ಇರುತ್ತಿದ್ದವು: "ಪಂಚಮಹಾಶಬ್ದಂಗಳುಂ ಬದ್ದವಣದ ಪಱೆಗಳುಂ ಬಾಜಿಸೆ ಅರಮನೆಯಂ ಪೊಕ್ಕು" ಎಂಬ ವರ್ಣನೆ 'ವಡ್ಡಾರಾಧನೆ'ಯಲ್ಲಿದೆ. ಈ ವಾದ್ಯಗಳ ಬಜಾವಣೆ ಮೊದಲು ದೇವಸ್ಥಾನಗಳಲ್ಲಿ ವಾಡಿಕೆಯಲ್ಲಿದ್ದು ಆನಂತರ ರಾಜಮರ್ಯಾದೆಗೆ ವಿಸ್ತಾರಗೊಂಡಿರಬೇಕು.

======

**ಪಂಚಾಂಗ:** ಇದೊಂದು ಸಂಸ್ಕೃತ ಪದ; ಪಂಚ+ಅಂಗ=ಐದು ಭಾಗ ಎಂಬ ಅರ್ಥವುಳ್ಳದ್ದು. ಸಾಮಾನ್ಯವಾಗಿ ಇದು ದಿನದ ಐದು ಅಂಶಗಳನ್ನು ಸೂಚಿಸುವಂಥದು. ಅವುಗಳೆಂದರೆ ತಿಥಿ, ವಾರ, ನಕ್ಷತ್ರ, ಕರಣ ಮತ್ತು ಯೋಗ.ಹೀಗಾಗಿ ವರ್ಷದ ಎಲ್ಲ ದಿನಗಳ ಈ ಐದರ ವಿವರಣೆಗಳನ್ನು ನೀಡುವ ಪುಸ್ತಕವನ್ನೂ ಪಂಚಾಂಗ ಎಂದೇ ಕರೆಯುತ್ತಾರೆ.ದಿನದ ಈ ಅಂಶಗಳಲ್ಲಿ ಯಾವುದೇ ದೋಷವಿಲ್ಲದಿರುವುದನ್ನು ಪಂಚಾಂಗಶುದ್ಧಿ ಎನ್ನುತ್ತಾರೆ. ಹೊಸವರ್ಷದ ಆರಂಭದಲ್ಲಿ ಮುಂಬರುವ ವರ್ಷದ ಶುಭಾಶುಭ ಫಲಗಳನ್ನು ಹೇಳುವುದು ಮತ್ತು ಕೇಳವುದು ಪಂಚಾಂಗಶ್ರವಣ ಎನಿಸಿಕೊಳ್ಳುತ್ತದೆ. ಈ ಫಲಗಳೇ ಪಂಚಾಂಗಫಲ.ಇದನ್ನು ವಚನಕಾರರು ವಿಡಂಬಿಸುತ್ತಾರೆ. 'ಪಂಚಾಂಗಬಿಚ್ಚು' ಎಂಬ ಈಗಿನ ಮಾತೂ ಬುರುಡೆ ಹೇಳು ಎಂಬರ್ಥದಲ್ಲಿ ಬಳಕೆಯಾಗುತ್ತಿದೆ.

ಪಂಚಾಂಗವೆಂಬ ಶಬ್ದವು [ಆಯುರ್ವೇದ] ಔಷಧದ ತಯಾರಿಕೆಯಲ್ಲಿ ಬಳಸುವ ಸಸ್ಯದ ಐದು ಭಾಗಗಳನ್ನು ಸೂಚಿಸುತ್ತದೆ: ತೊಗಟೆ, ಎಲೆ, ಹೂವು, ಬೇರು ಮತ್ತು ಹಣ್ಣು. ದೋಷರಹಿತವಾದ ಈ ಐದು ಅಂಶಗಳನ್ನು ನೋಡುವುದನ್ನು ಶಾಂತಿನಾಥನ 'ಸುಕುಮಾರಚರಿತೆ'ಯು 'ಪಂಚಾಂಗಶುದ್ಧಿ' ಎನ್ನುತ್ತದೆ ("ವೈದ್ಯನಂತೆ ಪಂಚಾಂಗಶುದ್ಧಿಯಂ ನೋಡಿ").

ರಾಜನೀತಿಯ ಐದು ಅಂಶಗಳನ್ನೊಳಗೊಂಡ ಸಮಾಲೋಚನೆಯನ್ನು 'ಪಂಚಾಂಗಮಂತ್ರ' ಎಂದು ಕೆಲವು ಕಡೆಗಳಲ್ಲಿ ಹೇಳಲಾಗಿದೆ: "ವಿಭವಮಂ ಪಂಚಾಂಗಮಂತ್ರಂ ಚತುರ್ಬಲಮಂ ಪ್ರಾಭವಂ ಎಯ್ದೆ ಮಾಡೆ" ಎಂಬುದು ಪೊನ್ನನ 'ಶಾಂತಿಪುರಾಣ'ದಲ್ಲಿ ಬರುವ ಮಾತು. ಕರ್ಮಾರಂಭೋಪಾಯ, ಪುರುಷದ್ರವ್ಯಸಂಪತ್ತು, ದೇಶಕಾಲವಿಭಾಗ, ವಿನಿಪಾತಪ್ರತೀಕಾರ ಮತ್ತು ಕಾರ್ಯಸಿದ್ಧಿ – ಎಂಬಿವು ರಾಜನೀತಿಯ ಐದು ಅಂಶಗಳು.

ಷಡಕ್ಷರದೇವನ 'ರಾಜಶೇಖರವಿಳಾಸ' ಕಾವ್ಯದಲ್ಲಿ ಐದು ಅಕ್ಷರಗಳ ಶ್ರೇಷ್ಠ ಮಂತ್ರ ಎಂಬರ್ಥದಲ್ಲಿ ('ನಮಃಶಿವಾಯ' ಎಂಬ ಐದಕ್ಷರದ ಮಂತ್ರ) 'ಪಂಚಾಂಗಸನ್ಮಂತ್ರ' ಎಂಬ ಮಾತನ್ನು ಬಳಸಿದಂತಿದೆ: "ಅರಿವರ್ಗಧ್ವಂಸಮಂ ಪೂಣ್ದೆಸಗಿ ಕಳೆದು ತಳೆದು ಪಂಚಾಂಗ ಸನ್ಮಂತ್ರಮಂ .. .. ತಾಳ್ದು"

## ಎಂವಿಸೀ – ಬದುಕು – ಒಂದು ನೋಟ–೨

––ಡಾ. ಪಿ.ವಿ. ನಾರಾಯಣ

ಎಸ್ಎಸ್ಎಲ್ಸಿ ಮುಗಿಯಿತೆಂದರೆ ಆ ಕಾಲಕ್ಕೆ ಹುಡುಗರು ಮದುವೆಯಾಗಿ ಸಂಸಾರ ಹೂಡಲು ಸಾಮರ್ಥ್ಯ ಪಡೆದಂತೆ.ಹೀಗಾಗಿ ಹಿರಿಯರು ಅವರಿಗೆ ಚಿ। ಸೌ। ಸಾವಿತ್ರಮ್ಮ ಎಂಬ ವಧುವಿನೊಡನೆ 1928 ರಲ್ಲಿ ಮದುವೆಯನ್ನೂ ನೆರವೇರಿಸಿದರು.ಈ ಹೊತ್ತಿಗೆ ಹುಡುಗ ಸೀತಾರಾಮಯ್ಯನಿಗೆ ಸಾಹಿತ್ಯ, ಸಂಗೀತ, ಚಿತ್ರಕಲೆ – ಮೂರರಲ್ಲಿಯೂ ಆಸಕ್ತಿ ಗಟ್ಟಿಯಾಗಿತ್ತು. ಸೀನಿಯರ್ ಇಂಟರ್ಮೀಡಿಯಟ್ ತರಗತಿಯಲ್ಲಿದ್ದಾಗ ತೀನಂಶ್ರೀ ಅವರ ಗಾಢ ಪ್ರಭಾವ ಇವರ ಮೇಲಾಯಿತು; ಇವರ ಪದ್ಯರಚನಾಸಕ್ತಿಯ ಕಡೆ ಅವರ ಗಮನ ಹರಿದು ಇವರಿಗೆ ಅದೇ ತಾನೆ ಪ್ರಕಟವಾಗಿದ್ದ ಬಿಎಂಶ್ರೀ ಅವರ 'ಇಂಗ್ಲಿಷ್ ಗೀತೆಗಳು' ಕೃತಿಯ ಪ್ರತಿಯೊಂದನ್ನು ಉಡುಗೊರೆಯಾಗಿ ಕೊಟ್ಟರಂತೆ. ಹೊಸಬಗೆಯ ಪದ್ಯರಚನೆಯ ಜಾಡು ಕಾಣಿಸಿದಂತಾಗಿ ಇವರು ಕೆಲವು ಪದ್ಯಗಳ್ನು ಬರೆದು ತೀನಂಶ್ರೀ ಅವರಿಗೆ ತೋರಿಸಿದರಂತೆ; ಅವರು ಸೂಕ್ತ ಮಾರ್ಗದರ್ಶನ ಮಾಡಿ ಇವರಿಗೆ ಪ್ರೋತ್ಸಾಹ ನೀಡುತ್ತಿದ್ದು, ಆಸಕ್ತಿಗೆ ಬೆಂಬಲ ತೋರಿದರು. ಇದು ನಡೆದದ್ದು 1926 ರಲ್ಲಿ, ಸೀತಾರಾಮಯ್ಯ ಹದಿನಾರರ ಹುಡುಗನಾಗಿದ್ದಾಗ.ಮುಂದೆ ಮಹಾರಾಜ ಕಾಲೇಜಿನ ವಿದ್ಯಾರ್ಥಿಯಾಗಿದ್ದಾಗ ಕಾಲೇಜಿನ ಕರ್ಣಾಟಕ ಸಂಘ ಪ್ರಕಟಿಸಿದ 'ತಳಿರು' ಎಂಬ ಕವನ ಸಂಕಲನದಲ್ಲಿ ಇವರ ಎರಡು ಕವಿತೆಗಳು ಸೇರ್ಪಡೆಗೊಳ್ಳಲೂ ತೀನಂಶ್ರೀ ಕಾರಣರಾದರು.ಆ ಹೊತ್ತಿಗೆ ಬಿಎಂಶ್ರೀ 'ರಜತ ಮಹೋತ್ಸವ ಸ್ವರ್ಣ ಕವಿತಾ ಸ್ಪರ್ಧೆ'ಯ ಏರ್ಪಾಡು ನಡೆದಿತ್ತು. ಸೀತಾರಾಮಯ್ಯನವರಿಗೆ ಅದರಲ್ಲಿ ಭಾಗಿಯಾಗಲು ಉತ್ಸಾಹ ಬಂದು ಭಗ್ನ ಪ್ರಣಯದ ವಸ್ತುವುಳ್ಳ ಸರಳರಗಳೆಯ 150 ಸಾಲುಗಳ ಕಥನಕವನವೊಂದನ್ನು ರಚಿಸಿ ತೀನಂಶ್ರೀ ಅವರಿಗೆ ತೋರಿಸಿದರಂತೆ; ಸ್ಪರ್ಧೆಗೆ ಬರುವ ಕವನಗಳು ಮುನ್ನೂರು ಸಾಲುಗಳಷ್ಟಿರಬೇಕೆಂದು ಹೇಳಿದ್ದಲ್ಲದೆ ಅವರು ಮತ್ತೂ ಕೆಲವು ಸೂಚನೆಗಳನ್ನು ಕೊಟ್ಟ ಮೇಲೆ ಅದನ್ನು ಪುನಾರಚನೆ ಮಾಡಿ ಕವನವನ್ನು ಸ್ಪರ್ಧೆಗೆ ಕಳಿಸಿದರು; ಅದಕ್ಕೆ ಸ್ವರ್ಣಪದಕ ಸಿಕ್ಕಿತು! ಹೊಸ ಕವಿಗೆ ಮನ್ನಣೆ ಸಿಕ್ಕಿದಂತಾಯಿತು. ಆನಂತರ ಅವರ ಆಸಕ್ತಿ ಸಣ್ಣಕತೆ, ಪ್ರಬಂಧ, ನಾಟಕ ಮುಂತಾದ ಇತರ ಸಾಹಿತ್ಯ ಪ್ರಕಾರಗಳ ಕಡೆಯೂ ಹರಿಯಲಾರಂಭಿಸಿತು. ಇಂಗ್ಲಿಷ್ ಕತೆಗಾರ ನದೇನಿಯಲ್ ಹಾದಾರ್ನ್‌ನ ಪ್ರಭಾವದಲ್ಲಿ ರಚಿಸಿದ ಮತ್ತು ರೂಪಾಂತರಿಸಿದ ಕೆಲವು ಕತೆಗಳು 1936 ರಲ್ಲಿ 'ಶಿಲಾಮುಖ' ಎಂಬ ಹೆಸರಿನ ಸಂಕಲನವಾಗಿ ಹೊರಬಂತು.ಇದು ಸೀತಾರಾಮಯ್ಯನವರ ಮೊದಲ ಪ್ರಕಟಿತ ಪುಸ್ತಕ.ಆನಂತರ ಅವರ ಲೇಖನಿ ಮತ್ತಷ್ಟು ಕ್ರಿಯಾಶೀಲ

# ಬಿ.ಎಂ.ಶ್ರೀ ಪ್ರತಿಷ್ಠಾನದ ಸಹಯೋಗದಲ್ಲಿ ಕರ್ನಾಟಕ ಲೇಖಕಿಯರ ಸಂಘದ ಕಾರ್ಯಕ್ರಮ

## ಸಾಹಿತ್ಯ ಸಂಚಲನ ಸರಣಿ ಕಾರ್ಯಕ್ರಮಕ್ಕೆ ಚಾಲನೆ

ಕರ್ನಾಟಕ ಲೇಖಕಿಯರ ಸಂಘವು ಬಿಂ.ಎಂ.ಶ್ರೀ ಪ್ರತಿಷ್ಠಾನದ ಸಹಯೋಗದಲ್ಲಿ ಹಮ್ಮಿಕೊಂಡಿರುವ 'ಸಾಹಿತ್ಯ ಸಂಚಲನ' ಸರಣಿ ಕಾರ್ಯಕ್ರಮದ ಅಂಗವಾಗಿ ಮೊದಲನೇ ಕಾರ್ಯಕ್ರಮವನ್ನು ಜುಲೈ ೧೮ರಂದು ಸಂಜೆ ಎಂ.ವಿ.ಸೀ ಸಭಾಂಗಣದಲ್ಲಿ ಪ್ರಾರಂಭಿಸಲಾಯಿತು. ಖ್ಯಾತ ಕವಿಗಳಾದ ಶ್ರೀ ಬಿ.ಆರ್. ಲಕ್ಷ್ಮಣರಾವ್ 'ನಗೆ,ಬಗೆಬಗೆ' ವಿಷಯದಲ್ಲಿ ಉಪನ್ಯಾಸ ನೀಡುತ್ತಾ ಕವಿ ಹಾಗು ಕವಿತೆಗಳೊಳಗಿನ ನಾನಾ ಬಗೆಯ ಸಾಮರಸ್ಯ ಕುರಿತು ಮಾತನಾಡುತ್ತಾ ಇಷ್ಟವಾದ್ದೋ, ಇಷ್ಟವಾಗದಿರುವುದೋ ಎಂದು ಯಾವುದೇ ಕವಿತೆಯನ್ನು ಓದಿಗರು ಹೇಳುವುದೇ ಸರಿಯಾದದ್ದು, ಬದಲಿಗೆ ಅದನ್ನು ಕೆಟ್ಟ ಕವಿತೆ ಎಂದು ಹೇಳಲಾಗದು' ಎಂದರು. ಒಳ್ಳೆಯ ಕವಿಯೆಂದು ಗುರುತಿಸಿಕೊಂಡವರು ಕೂಡ ಹಾಸ್ಯ ಕವನಗಳನ್ನು ಬರೆಯಬಲ್ಲರು, ಗೇಲಿ, ಲೇವಡಿ, ಅಣಕು ಮೇರು ಹಾಸ್ಯಗಳಿಗಿಂತ ನಮ್ಮನ್ನು ನೋಡಿ ನಾವೇ ನಗುವಂತಹದ್ದು ಅತ್ಯುತ್ತಮವೆನ್ನಬಹುದು. ಹಾಗೆಯೇ ಎಡವಿದಾಗ ನಗುವುದು ಅಪಾಯಕಾರಿ ಪ್ರತಿಕ್ರಿಯೆ', 'ಸಿಹಿ ಲೇಪಿತ ಕಹಿಗುಳಿಗೆಯಾಗಿ ಕೆಲವೊಮ್ಮೆ ಕವನ ಕಾಣಿಸಬಹುದಾದರೂ ಹಾಸ್ಯ ಕವಿತೆ ಕಾವ್ಯ ಲೋಕದ ಜೋಕ್ ಅಂತೂ ಅಲ್ಲ!' ಎಂದು ಅಭಿಪ್ರಾಯಪಟ್ಟರು.. 'ಪ್ರತಿಭೆಯ ಜೊತೆ ಕೌಶಲ್ಯಗಳನ್ನು ಬೆಳೆಸಿಕೊಂಡಾಗ ಉತ್ತಮ ಕವಿತೆಗಳು ಮೂಡಿ ಬರಲು ಸಾಧ್ಯವಾಗುವುದು' ಎಂದು ಕಿವಿ ಮಾತು ಹೇಳಿದರು.

ಬಿ.ಎಂ.ಶ್ರೀ ಪ್ರತಿಷ್ಠಾನದ ಅಧ್ಯಕ್ಷರಾದ ಡಾ.ಪಿ.ವಿ.ನಾರಾಯಣ ಅವರು ಮಾತನಾಡುತ್ತಾ 'ಕಷ್ಟಗಳು, ನೋವುಗಳಿದ್ದಾಗ ನಗುವಿಗಿಂತ ಅಳುವೇ ಒಳ್ಳೆಯದು. ಅತ್ತರೆ ಮನಸ್ಸು ಹಗುರಾಗುವುದು, ಹಾಗಾಗಿ ಕೆಲವೊಮ್ಮೆ ಕಣ್ಣೀರನ್ನು ತಡೆ ಹಿಡಿಯದಿರುವುದೇ ವಾಸಿ' ಎಂದರು.




ಕರ್ನಾಟಕ ಲೇಖಕಿಯರ ಸಂಘದ ಅಧ್ಯಕ್ಷೆ ಶ್ರೀಮತಿ ವನಮಾಲಾ ಸಂಪನ್ನಕುಮಾರ ತಮ್ಮ ಪ್ರಾಸ್ತಾವಿಕ ಭಾಷಣದಲ್ಲಿ 'ಕರ್ನಾಟಕ ಲೇಖಕಿಯರ ಸಂಘವು ಬಿ.ಎಂ.ಶ್ರೀ ಪ್ರತಿಷ್ಠಾನದ ಸಹಯೋಗದಲ್ಲಿ ಮುಂದಿನ ದಿನಗಳಲ್ಲಿ ಸಾಹಿತ್ಯ ಸಂಚಲನ ಕಾರ್ಯಕ್ರಮಗಳ ಮೂಲಕ ಸಾಹಿತ್ಯದ ಎಲ್ಲಾ ಪ್ರಕಾರಗಳಲ್ಲೂ ಸಂಘದ ಲೇಖಕಿಂ-ಯರಿಗೆ ಹಾಗು ಸಾಹಿತ್ಯ ಸಂಚಲನ ಕಾರ್ಯಕ್ರಮಗಳ ಮೂಲಕ ಸಾಹಿತ್ಯದ ಎಲ್ಲಾ ಪ್ರಕಾರಗಳಲ್ಲೂ ಸಂಘದ ಲೇಖಕಿಯರಿಗೆ ಹಾಗು ಸಾಹಿತ್ಯಾಸಕ್ತರಿಗೆ ಹೆಚ್ಚಿನ ಮಾಹಿತಿ ಒದಗಿಸಲು ಪ್ರಯತ್ನಿಸಲಿದೆ' ಎಂದರು.

ಕರ್ನಾಟಕ ಲೇಖಕಿಯರ ಸಂಘದ ಕಾರ್ಯದರ್ಶಿ ಶ್ರೀಮತಿ ನಾಗರತ್ನ ಚಂದ್ರಶೇಖರ್ ಸಾಹಿತ್ಯ ಸಂಚಲನ ಕಾರ್ಯಕ್ರಮಕ್ಕೆ ಎಲ್ಲರನ್ನು ಸ್ವಾಗತಿಸಿ ವಂದನಾರ್ಪಣೆ ಮಾಡಿದರು. ಶ್ರೀಮತಿ ಆಶಾ ಹೆಗಡೆ ಮುಖ್ಯ ಅತಿಥಿಗಳ ಪರಿಚಯ ಮಾಡಿಕೊಟ್ಟರು.

## ಕಿರುಪರಿಚಯ

### ಡಾ॥ ಜಿ. ಕೃಷ್ಣಪ್ಪ

ಡಾ.ಜಿ. ಕೃಷ್ಣಪ್ಪನವರು ೨೦-೧೦-೧೯೪೮ರಂದು ಜನಿಸಿದ್ದು ಕೆಎಸ್ಆರ್‌ಟಿಸಿಯಲ್ಲಿ ಅಧಿಕಾರಿಯಾಗಿ ಸೇವೆ ಸಲ್ಲಿಸಿ ನಿವೃತ್ತರಾಗಿರುತ್ತಾರೆ. ಶ್ರೀಯುತರು ಮೈಸೂರು ವಿಶ್ವವಿದ್ಯಾಲಯದಿಂದ ಬೇಂದ್ರೆಯವರ ಸಾಹಿತ್ಯದಲ್ಲಿ ಸ್ತ್ರೀ-ಒಂದು ಅಧ್ಯಯನ ಎಂಬ ವಿಷಯದ ಬಗ್ಗೆ ಪಿಎಚ್.ಡಿ. ಪಡೆದಿರುತ್ತಾರೆ. ಇವರು ಸರಳಗನ್ನಡ ಆಕರ್ಷಕ ಶೈಲಿ, ಮೊನಚು ಭಾಷೆಯಲಿ ಸಾಹಿತ್ಯದ ಒಳ ಹೊರಗನ್ನು ನವಿರಾಗಿ ಚಿತ್ರಿಸಿ ಕನ್ನಡ ಸಾಹಿತ್ಯ ಲೋಕದಲ್ಲಿ ವಿಶಿಷ್ಟ ಛಾಪು ಮೂಡಿಸಿರುವ ಸಾಹಿತಿ.

ಕೃತಿಗಳು: ನಾಕುತಂತಿ ಒಂದು ಟಿಪ್ಪಣಿ, ಹೂತದ ಹುಣಸಿ. ಬರಹದಲ್ಲಿ ಬೇಂದ್ರೆಯವರ ಬದುಕು, ಅಂತರಂಗದತ್ತ ನಯನ, ಹಾಡುಹಕ್ಕಿ ಅಂಬಿಕಾತನಯ ದತ್ತ, ಡಾ. ಬೇಂದ್ರೆ(ಆಂಗ್ಲ ಕೃತಿ-ಮೈಸೂರು ವಿವಿ ಪ್ರಕಟಿತ) ಬೇಂದ್ರೆಯವರ ಸಾಹಿತ್ಯದಲ್ಲಿ ಶರಣ ಚಿಂತನೆ. ತಿರುತಿರುಗಿಯು ಹೊಸತಾಗಿರಿ. ಇತರ ಕೃತಿಗಳು: ರಸ್ತೆ ನಿಯಮಗಳು, ಕನ್ನಡ ವಿಶ್ವ ವಿದ್ಯಾಲಯ ಹಂಪಿ ದೂರ ಶಿಕ್ಷಣ ಕೇಂದ್ರದ ಎಂ.ಎ. ವಿದ್ಯಾರ್ಥಿಗಳಿಗೆ 'ನಾದಲೀಲೆ' ಪಠ್ಯದ ಮಾರ್ಗದರ್ಶನ ಪಾಠ ಹಾಗೂ ಅಂಕಣ ಬರಹ: 'ಬೋಧಿವೃಕ್ಷ'ದಲ್ಲಿ ಬೇಂದ್ರೆ ಕಾವ್ಯ ವಿಮರ್ಶೆಯ ಇಪ್ಪತ್ತೈದು ಲೇಖನಗಳು.

ಪ್ರಾಚೀನ ಕಾವ್ಯವನ್ನು ಸರಳಗನ್ನಡದಲ್ಲಿ ಭಾವಾನುವಾದ; ಮಹಾಕವಿ ಲಕ್ಷ್ಮೀಶನ 'ವಚನ ಜೈಮಿನಿ ಭಾರತ', ಹರಿಹರ 'ವಚನ ಗಿರಿಜಾ ಕಲ್ಯಾಣ', ರಾಘವಾಂಕನ 'ವಚನ ಹರಿಶ್ಚಂದ್ರ ಚಾರಿತ್ರ್ಯ' ಕನಕದಾಸರ 'ನಳದಮಯಂತಿ ಪ್ರೇಮಕಥೆ',

ವಿಭಿನ್ನ ರೀತಿಯಲ್ಲಿ ಸಾಹಿತ್ಯಸೇವೆ: ೧೯೮೮ರಿಂದ ಶಾಲಾ ಕಾಲೇಜುಗಳಲ್ಲಿ ದ.ರಾಬೇಂದ್ರೆ ಕವನ ಗಾಯನ ಸ್ಪರ್ಧೆ ಹಮ್ಮಿಕೊಂಡು ಬೇಂದ್ರೆ ಅವರ ಕವನ ಸಂಕಲನಗಳ ಸಾವಿರಾರು ಪ್ರತಿಗಳನ್ನು ವಿದ್ಯಾರ್ಥಿಗಳಿಗೆ ಬಹುಮಾನವಾಗಿ ನೀಡಿ ಸಾಹಿತ್ಯಾಸಕ್ತಿ ಉಂಟುಮಾಡಿರುತ್ತಾರೆ. ಕೆ.ಜಿ.ಎಫ್.ನ ದೊಡ್ಡ ಪೊನ್ನಂಡಹಳ್ಳಿ ಸರ್ಕಾರಿ ಪ್ರೌಢಶಾಲೆಯಿಂದ ಉತ್ತರದ ಬೀದರನ ತುಟ್ಟತುದಿಯ ಕಮಲಾನಗರದವರೆಗೆ, ಚಾಮರಾಜನಗರದ ಗುಂಡ್ಲುಪೇಟೆಯಿಂದ ಬಿಜಾಪುರದ ಹಲಸಂಗಿಯವರೆಗೆ ೫೨೦ಕ್ಕೂ ಹೆಚ್ಚು ಕಾರ್ಯಕ್ರಮಗಳನ್ನು ನಡೆಸಿರುತ್ತಾರೆ.

ಗಳಿಸಿರುವ ಪ್ರಶಸ್ತಿಗಳು: ಜಿ.ಪಿ. ರಾಜರತ್ನಂ ಕನ್ನಡ ಪರಿಚಾರಕ ಪ್ರಶಸ್ತಿ, ಅಂಬಿಕಾತನಯ ದತ್ತ ಪ್ರಶಸ್ತಿ.

ಮೈಸೂರಿನ ಧ್ವನ್ಯಾಲೋಕದಲ್ಲಿ 'ಜಾತ್ರೆ' ನಾಟಕ ನಿರ್ದೇಶನ, ಕುಣಿಯೋಣು ಬಾರ ಬೇಂದ್ರೆಯೊಡನೆ' ರೂಪಕ ರಚನೆ ಹಾಗೂ ಪ್ರದರ್ಶನ. ಧ್ವನ್ಯಾಲೋಕ ಮತ್ತು ಸಿ.ಎಫ್.ಟಿ.ಆರ್ ಐ ನಲ್ಲಿ ಕಂಸಾಳೆಯಲ್ಲಿ ಬೇಂದ್ರೆ ಕಾವ್ಯಪ್ರಯೋಗ.

ಸ್ನಾತಕೋತ್ತರ ವಿದ್ಯಾರ್ಥಿಗಳಿಗೆ ಬೇಂದ್ರೆ ಕಾವ್ಯ ವಿಮರ್ಶಾ ಸ್ಪರ್ಧೆ: ೨೦೦೭ರಲ್ಲಿ ದ.ರಾ. ಬೇಂದ್ರೆ ಕಾವ್ಯ ಕೂಟ(ರಿ) ಸ್ಥಾಪಿಸಿ ಅಧ್ಯಕ್ಷರಾಗಿ ಹತ್ತು ವರ್ಷಗಳಿಂದ ಲೇಖನ ಸ್ಪರ್ಧೆ ನಡೆಸುತ್ತಿದ್ದಾರೆ.

## ಡಾ.ಸಿ.ಪಿ.ಕೆ.ಅವರ ಅಂಗೈಯಲ್ಲಿ ಕುವೆಂಪು – ಒಂದು ಅವಲೋಕನ

ಡಾ.ಸಿ.ಪಿ.ಕೆ.ಅವರ ಅಂಗೈಯಲ್ಲಿ ಕುವೆಂಪು ಆಸಕ್ತರಿಗೆ ಒಂದು ಒಳ್ಳೆಯ ಪುಸ್ತಕ.ಸಾಮಾನ್ಯ ಓದುಗರಿಗೆ ಕೈಗೆಟುಕುವ ಹೊತ್ತಿಗೆ. ಕರಿಯನ್ನು ಕನ್ನಡಿಯಲ್ಲಿ ತೋರಿಸುವ ರೀತಿಯಲ್ಲಿ ಈ ಲೇಖಕರು ಸಹೃದಯರಿಗೆ ಕುವೆಂಪುವನ್ನು ಪರಿಚಯಿಸಿದ್ದಾರೆ. ಈ ಕೃತಿಯ ಒಳಗೆ ಪ್ರವೇಶಿಸಿದರೆ ಹನ್ನೊಂದು ಭಾಗಗಳಿದ್ದು, ಆ ಭಾಗಗಳೆಲ್ಲವೂ ಹೃದಯಕ್ಕೆ ಚೆಲುವಿನ ಚಿತ್ತಾರವನ್ನು ಕೊಡುತ್ತವೆ.

ವ್ಯಕ್ತಿ ಮತ್ತು ಕೃತಿಯಲ್ಲಿ ಕುವೆಂಪು ಅವರ ಮೇರು ವ್ಯಕ್ತಿತ್ವವನ್ನು ಕೃತಿ–ಕಾರರು ಚಿತ್ರಿಸಿದ್ದಾರೆ. ಬಾಲ್ಯದಿಂದ ಹಿಡಿದು ಸಾಧನೆಯ ಶಿಖರದವರೆವಿಗೂ ಕುವೆಂಪು ನಡೆದು ಬಂದ ದಾರಿಯ ವರ್ಣನೆ ರಂಜನೀಯವಾಗಿದೆ. ಆಡು ಮುಟ್ಟದ ಸೊಪ್ಪುಯಿಲ್ಲವೆಂಬಂತೆ ಕುವೆಂಪು ಅವರು ಸಾಹಿತ್ಯದ ಎಲ್ಲಾ ಪ್ರಕಾರಗಳಲ್ಲೂ ಕೈಯಾಡಿಸಿರುವುದನ್ನು ಈ ಕೃತಿಯಲ್ಲಿ ಲೇಖಕರು ಮನ ಮುಟ್ಟುವಂತೆ ಬರೆದಿದ್ದಾರೆ. ಸಾಹಿತ್ಯಕ್ಕಿಂತ ಬದುಕು ದೊಡ್ಡದು ಮತ್ತು ಮುಖ್ಯವಾದುದ್ದು ಎಂಬುದನ್ನು ಮಹಾಕವಿಯಾಗಿ ತೋರಿಸಿರುವ ಕುವೆಂಪು ಅವರು ಕನ್ನಡ ಸಾಹಿತ್ಯಕ್ಕೆ ಬಹುಮುಖ ಕೊಡುಗೆಯನ್ನು ನೀಡಿದ್ದಾರೆ.

ವೈಚಾರಿಕತೆ, ವೈಜ್ಞಾನಿಕ ದೃಷ್ಟಿಯನ್ನು ಇಟ್ಟುಕೊಂಡಿದ್ದರೂ ಆಧ್ಯಾತ್ಮವನ್ನು ಮಾನ್ಯ ಮಾಡಿದ್ದಾರೆ. ಭಾರತೀಯ ಪರಂಪರೆಗೆ ತಮ್ಮನ್ನು ತಾವು ಸಂಪೂರ್ಣವಾಗಿ ತೊಡಗಿಸಕೊಂಡಿರುವುದರಿಂದಲೇ ಕುವೆಂಪುರವರನ್ನು ಈ ಕೃತಿಯ ಲೇಖ–ಕರು ದಾರ್ಶನಿಕ ಕುವೆಂಪು ಎಂದು ಕರೆದಿರುವುದು ಸೂಕ್ತವೆನಿಸುತ್ತದೆ. ದೇವರು ಮತ್ತು ಧರ್ಮದ ಬಗ್ಗೆ ತಮ್ಮದೇ ಆದ ನಿಲವು ಹೊಂದಿದ ಕುವೆಂಪುರವರು ದೇವನೊಬ್ಬ ನಾಮ ಹಲವು ಎಂಬ ವಿಚಾರವನ್ನು ದೃಢವಾಗಿ ನಂಬಿರುವುದನ್ನು ಸಿ.ಪಿ.ಕೆ. ತಮ್ಮ ಕೃತಿಯಲ್ಲಿ ತಿಳಿಸಿರುತ್ತಾರೆ.

ಕುವೆಂಪು ಅವರು ಜೀವನದುದ್ದಕ್ಕೂ ಸರ್ವರಿಗೂ ಸಮಬಾಳು ಸರ್ವರಿಗೆ ಸಮಪಾಲು ಎಂದು ಸಾರಿದವರು ಮತ್ತು ವಿಶ್ವಮಾನವ ಸಂದೇಶವನ್ನು ಇಡೀ ಜಗತ್ತಿಗೆ ಸಾರಿ ಸ್ವತಃ ಅದನ್ನು ಅನುಸರಿಸುತ್ತಾ ಬಂದಿರುವುದು ಈ ಕೃತಿಯಲ್ಲಿ ಲೇಖಕರು ದಾಖಲಿಸಿದ್ದಾರೆ. ಪ್ರತಿಯೊಬ್ಬರೂ ವಿಚಾರಕ್ಕೆ ಸಂಬಂಧಪಟ್ಟ ರೀತಿಯಲ್ಲಿ ಆಲೋಚಿಸಬೇಕು ಆಗ ಮಾತ್ರ ವೈಚಾರಿಕ ನಿಲುವನ್ನು ತಾಳಲು ಸಾಧ್ಯ ಎಂಬುದು ಕುವೆಂಪು ಅವರ ನಿಲುವು.

ಸಾಹಿತ್ಯ ಜೀವನದ ಚಿತ್ರಣ ಮಾತ್ರ ಅಲ್ಲ ಅದೂ ವಿಮರ್ಶೆಯೂ ಹೌದು. ಕುವೆಂಪು ಅವರು ತಮ್ಮ ಕಾದಂಬರಿಗಳಲ್ಲಿ ಜನಜೀವನ ಚಿತ್ರಣವನ್ನು ಕಣ್ಣಿಗೆ ಕಟ್ಟುವಂತೆ ತೋರಿಸಿ ಕಾದಂಬರಿಯಲ್ಲಿಯೂ ವೈಚಾರಿಕ ಪ್ರಜ್ಞೆಯನ್ನು ಅನಾವರಣಗೊಳಿಸಿದ್ದಾರೆ. ಒಟ್ಟಿನಲ್ಲಿ ಡಾ.ಸಿ.ಪಿ.ಕೆ. ಯವರ ಕೃತಿ ರಸಪೂರ್ಣವಾದದ್ದು. ಮಕ್ಕಳಿಂದ ಹಿಡಿದು ವೃದ್ಧರವರೆಗೂ ಅರ್ಥವಾಗುವಂತಹದ್ದು "ಅಂಗೈಯಲ್ಲಿ ಕುವೆಂಪು".

**ಡಾ.ಆರ್.ವಾದಿರಾಜ್**
ಸಹಾಯಕ ಪ್ರಾಧ್ಯಾಪಕರು, ವಿಜಯ ಕಾಲೇಜು

**HONGANASU KANNADA MONTHLY**
**RNI No. KAR/KAN/2015/64049**
**REGISTERED**
**Post office Registration No.RNP/KA/BGS/2229/2018-2020**
**dt. 27-10-2017**
**Office of Posting: Bangalore PSO, Bangalore 560026**
**Price :Annual Subscription Rs. 20/-**
**Date of publishing and Posting : 30-07-2018**

ಒಂದನೇ ಪುಟದಿಂದ

### ಗೋವಿಂದರಾವ್ ಜಾಲಿಹಾಳ ದತ್ತಿ ಭಕ್ತಿ ಗೀತೆಗಳ ಸ್ಪರ್ಧೆ ಕಾರ್ಯಕ್ರಮ

ಸ್ಪರ್ಧೆಗೆ ೨೨ ವಿದ್ಯಾರ್ಥಿಗಳು ಆಗಮಿಸಿದ್ದು, ಸ್ಪರ್ಧೆ ಬಹಳ ತೀವ್ರವಾಗಿ ಪೈಪೋಟಿಯೊಡ್ಡಿತು.ಅಂತಿಮವಾಗಿ ಕೆಳಕಂಡ ಸ್ಪರ್ಧಿಗಳು ಬಹುಮಾನ ಪಡೆದರು.

**ಮೊದಲ ಬಹುಮಾನ : ಕುಮಾರಿ ನಿಶಿತ ಪ್ರಸಾದ್**
**ಎರಡನೆ ಬಹುಮಾನ : ಕುಮಾರಿ ನಿಧಿಶ್ರೀ ಎಂ.**
**ಮೂರನೆ ಬಹುಮಾನ : ಕುಮಾರಿ ಆಶಾ ಭಟ್ ಪಿ.**
ಸಮಾಧಾನಕರ ಬಹುಮಾನ ಪಡೆದವರು
೧. ಕುಮಾರಿ ಅಧಿತಿ ನಾಡಿಗ್
೨. ಕುಮಾರಿ ವಿಧಾತ್ರಿ
೩. ಕುಮಾರಿ ಸ್ಫೂರ್ತಿರಾಣಿ

ಎಲ್ಲಾ ಬಹುಮಾನಗಳನ್ನು ಶ್ರೀ ಮಿಲಿಂದ್ ಜಾಲಿಹಾಳ್ ಮತ್ತು ಶ್ರೀಮತಿ ಮಾನಸಿ ಜಾಲಿಹಾಳ್ ಅವರೇ ಪ್ರಾಯೋಜಿಸಿದ್ದರು. ತೀರ್ಪುಗಾರರು ಸ್ಪರ್ಧಿಗಳಿಗೆ ಹಿತವಚನ ನೀಡಿದ ಬಳಿಕ, ಕಾರ್ಯಕ್ರಮವು ಶ್ರೀ ಗುರುಪ್ರಸಾದ್ ಅವರ ವಂದನಾರ್ಪಣೆಯೊಂದಿಗೆ ಮುಕ್ತಾಯವಾಯಿತು.

### ಪ್ರತಿಷ್ಠಾನದ ಗ್ರಂಥಾಲಯ

ಪ್ರತಿಷ್ಠಾನದ ಗ್ರಂಥಾಲಯದಲ್ಲಿದ್ದ ಎಲ್ಲಾ ಗ್ರಂಥಗಳನ್ನು ಪರಿಶೀಲಿಸಿ ಅನಗತ್ಯ ಪುಸ್ತಕಗಳನ್ನು ವಿಲೇವಾರಿ ಮಾಡಿ ಉತ್ತಮ ಹಾಗೂ ಅಲಭ್ಯ ಗ್ರಂಥಗಳನ್ನು ಪುನರ್‌ಜೋಡಿಸಲಾಗಿದೆ. ನಮ್ಮ ಗ್ರಂಥಾಲಯವು ಸಂಶೋಧಕರಿಗೆ ಹಾಗೂ ಕನ್ನಡ ವಿದ್ಯಾರ್ಥಿಗಳಿಗೆ ಉಪಯುಕ್ತವಾಗಬೇಕು ಎಂಬ ಉದ್ದೇಶದಿಂದ ಬಹಳಷ್ಟು ಶ್ರಮ ವಹಿಸಲಾಗಿದೆ. ನಮ್ಮ ಗ್ರಂಥಾಲಯದ ಬಳಕೆ ಮಾಡಿಕೊಳ್ಳಲು ಎಲ್ಲಾ ಕನ್ನಡಾಭಿಮಾನಿಗಳನ್ನು ಕೋರುತ್ತೇವೆ.

**Printed and published by** : B.R.Ravindranath on behalf of the BMSRI SMARAKA PRATISHTANA, 3rd Main Road, NR Colony, Bangalore - 560019 and printed at Annapoorneshwari Printers, No. 11, 10 'C' Main, 6th Block, Rajajinagar, Bangalore 10. and published at BMSRI SMARAKA PRATISHTANA, 3rd Main Road, NR Colony, Bangalore - 560019 Editor : B.R.Ravindranath

ಅಚ್ಚಾದ ಪುಸ್ತಕ

ತೆರೆದ–ಅಂಚೆ

ಶ್ರೀಮತಿ/ಶ್ರೀ..............................................................................

..............................................................................

..............................................................................

ವಿಳಾಸ
**ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ**
ಬಿ.ಎಂ.ಶ್ರೀ. ಕಲಾಭವನ, ೩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ, ಬೆಂಗಳೂರು – ೧೯
ದೂರವಾಣಿ : ೨೬೬೧೫೮೭೭